ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

೧ನೇ ವರ್ಷ · ೭ನೇ ಸಂಚಿಕೆ · ಬೆಲೆ ೭೦ ಪೈಸೆ
ಕೊಪ್ಪ ೧೨-೨-೧೯೮೧ · ಭಾನುವಾರ · ದೂರವಾಣಿ : ೧೧೮

## ...ನಲ್ಲಿ ಬೆಳಕಿನ ಶಟ್ಲ್ ಪಂದ್ಯಾವಳಿ

ಕೊ... ...ಲಿ ಫ್ರೆಂಡ್ಸ್ ಶಟ್ಲ್ ಬ್ಯಾ... ಅಸೋಸಿಯೇಶನ್ ಆಶ್ರಯದ ೫ನೇ ವರ್ಷದ ಆಹ್ವಾನಿತ ಜಿಲ್ಲಾ ಮಟ್ಟದ ಹೊನಲು ಬೆಳಕಿನ ಶಟ್ಲ್ ಬ್ಯಾಡ್ಮಿಂಟನ್ ಪಂದ್ಯಾವಳಿ ಇದೇ ೨೧ ರಿಂದ ೨೩ ರವರೆಗೆ ನಡೆಯಲಿದೆ

ಪುರುಷರ ಮತ್ತು ಮಹಿಳೆಯರ ಡಬಲ್ಸ್ ಹಾಗೂ ಮಿಶ್ರ ಡಬಲ್ಸ್ ಸ್ಪರ್ಧೆಗಳಿರುತ್ತ ಈ ಪಂದ್ಯಾವಳಿ ಕೆಳಪೇಟೆಯ ತೋಮರ ಶೆಟ್ಟಿ ಶಾಲೆಯಲ್ಲಿ ಪ್ರತಿ ಸಂಜೆ ೬-೩೦ ರಿಂದ ನಡೆಯಲಿದ್ದು, ೨೪ ತಂಡಗಳನ್ನು ನಿರೀಕ್ಷಿಸಲಾಗಿದೆ.

ಆಹ್ವಾನಿತ ತಂಡಗಳು ಪ್ರವೇಶವನ್ನು ಕಳಿಸಲು ಕಡೇದಿನಾಂಕ, ೧೫-೨-೧೯೮೧ ವಿಳಾಸ : ಅಬ್ದುಲ್ ಗಫಾರ್, ಬದ್ರಿಯಾ ರೆಸ್ಟೋರೆಂಟ್, ಕೊಪ್ಪ ಅಥವಾ ಅಬ್ದುಲ್ ಹಮೀದ್, ಟಾಟಾ ಆರ್ಟ್ಸ್, ಕೊಪ್ಪ

# ಶಂಕರ್ ಸಾರಿಗೆ ಕಾರ್ಮಿಕರ ಮುಷ್ಕರ ವಾಪಸು;
# ಆದರೆ ಮಾಲಿಕರಿಂದ 'ಲಾಕೌಟ್' ಘೋಷಣೆ!

ಕೊಪ್ಪ : ಮಲೆನಾಡಿನ ಕಾರ್ಮಿಕ ಚಳುವಳಿಯ ಇತಿಹಾಸದಲ್ಲಿ ಒಂದು ಮೈಲಿಗಲ್ಲನ್ನು ಸೃಷ್ಟಿಸಿದ ಶಂಕರ್ ಸಾರಿಗೆ ಕಾರ್ಮಿಕರ ಹೋರಾಟ ಸದ್ಯಕ್ಕೆ ಹಿನ್ನಡೆ ಅನುಭವಿಸಿದೆ

**ಡೀಸೆಲ್ ಕೊರತೆ, ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು, ಜೊತೆಗೆ ೫೫ ದಿನಗಳಷ್ಟು ಸುದೀರ್ಘ ಮುಷ್ಕರದ ನಂತರವೂ ಯಾವುದೇ ಇತ್ಯರ್ಥ ಸಾಧ್ಯವಾಗದಿರುವುದು— ಈ ಹಿನ್ನೆಲೆಯಲ್ಲಿ ಕಾರ್ಮಿಕ ಸಂಘ ಮುಷ್ಕರವನ್ನು ಹಿಂತೆಗೆದುಕೊಂಡಿರುವುದಾಗಿ ಫೆ ೮ರಂದು ಬೆಂಗಳೂರಿನ ಸಂಧಾನ ಸಭೆಯಲ್ಲಿ ಘೋಷಿಸಿತು.**

ಆದರೆ, ಫೆ. ೯ರಂದು ಕಾರ್ಮಿಕರು ಕೆಲಸಕ್ಕೆ ಹಾಜರಾಗಲು ಕಂಪೆನಿಗೆ ಹೋದರೆ, ಆಡಳಿತ ವರ್ಗವು ತಾನು ಫೆ. ೭ರಿಂದಲೇ ಸಂಸ್ಥೆಗೆ ಬೀಗ ಮುದ್ರೆ (ಲಾಕೌಟ್) ಘೋಷಿಸಿರುವುದಾಗಿ ಹೇಳಿ, ಕಾರ್ಮಿಕರನ್ನು ಹಿಂದಕ್ಕೆ ಕಳಿಸಿದೆ.

'ಲಾಕೌಟ್' ಘೋಷಿಸಿರುವುದಕ್ಕೆ ಕಾರಣಗಳು' ಎಂಬ ಜಾಹೀರಾತನ್ನು ಫೆ ೮ರ 'ಉದಯವಾಣಿ'ಯಲ್ಲಿ ಮಾತ್ರ ಪ್ರಕಟಿಸಿರುವ ಆಡಳಿತ ವರ್ಗವು, ಕಾರ್ಮಿಕರು ಸಂಸ್ಥೆಯಲ್ಲಿ ಧ್ವಂಸ ಕಾಂಡ ನಡೆಸಲು ಉದ್ದೇಶಿಸಿರುವುದರಿಂದ ರಕ್ಷಣೆ ಕೊಡುವಂತೆ ಕೋರಿ ಪೋಲೀಸರಿಗೂ ದೂರು ನೀಡಿದೆ

ಕಾರ್ಮಿಕ ಸಂಘವೂ ಕೂಡ ಕಾರ್ಮಿಕರು ಕೆಲಸಕ್ಕೆ ಶಾಂತ ರೀತಿಯಿಂದ ಹಾಜರಾಗದಂತೆ ಆಡಳಿತ ವರ್ಗವು ಹಿಂಸೆಗೆ ಪ್ರಚೋದನೆ ನೀಡುವ ಭಯವಿದ್ದು, ಕಾರ್ಮಿಕರಿಗೂ ಸಂಸ್ಥೆಯ ಬಸ್‌ಗಳು ಮತ್ತಿತರ ಆಸ್ತಿಪಾಸ್ತಿಗಳಿಗೂ ರಕ್ಷಣೆ ಕೇಳಿ ಪೋಲೀಸರಿಗೆ ಮನವಿ ಸಲ್ಲಿಸಿದೆ

ಈ ಹಿಂದಿನ ೨ ಬಾರಿಯ ಮುಷ್ಕರಗಳಂತಲ್ಲದೆ, ಈ ಬಾರಿ ನೂರಕ್ಕೆ ನೂರು ಕಾರ್ಮಿಕರು ಮತ್ತಿತರ ಎಲ್ಲ ಸಿಬ್ಬಂದಿ ಮುಷ್ಕರಕ್ಕಿಳಿದಿದ್ದುದನ್ನು ಇಲ್ಲಿ ಸ್ಮರಿಸಬಹುದು

ಲಾಕೌಟ್ ಬಗ್ಗೆ ಕಾರ್ಮಿಕ ಸಂಘಕ್ಕೆ ನೋಟೀಸ್ ನೀಡುವುದಾಗಲಿ, ಸರ್ಕಾರದ ಒಪ್ಪಿಗೆ ಪಡೆಯುವುದಾಗಲಿ ನಡೆದಿಲ್ಲವೆನ್ನಲಾಗಿದೆ.

**ಮಾನವಾದ ಬದುಕು ಕೇಳಿ ಮುಷ್ಕರಕ್ಕಿಳಿದ ಕಾರ್ಮಿಕರೇ ನೆಲಕಚ್ಚಿ ಬಗ್ಗಿ ಸಂಧಾನಕ್ಕೆ ಯತ್ನಿಸಿದಾಗಲೂ ಸಹ, ಸಾರ್ವಜನಿಕರ ಅಸಂಘಟನೆಯ ನಿಷ್ಕ್ರಿಯತೆಯನ್ನೂ, ಭ್ರಷ್ಟ ರಾಜಕಾರಣಿಗಳನ್ನೂ ಬಳಸಿಕೊಂಡು, ಕಾರ್ಮಿಕರನ್ನು ಬೀದಿ ಪಾಲು ಮಾಡಿ, ಸಾರ್ವಜನಿಕರನ್ನು ಸಹ ತನ್ನ ಮಾನಾಪಲಿಯ ಒತ್ತೆಯಾಳುಗಳಾಗಿ ಹಿಡಿದಿಟ್ಟುಕೊಳ್ಳುವ ಹವಣಿಕೆಯಂತೆ ಕಾಣುತ್ತಿರುವ ಆಡಳಿತ ವರ್ಗದ ಈ ಅತ್ಯ ತಂತ್ರವನ್ನು ಕಾರ್ಮಿಕರಾಗಲಿ ಸಾರ್ವಜನಿಕರಾಗಲಿ ಯಾವ ರೀತಿ ಎದುರಿಸುತ್ತಾರೆಂದು ಕಾದು ನೋಡಬೇಕಿದೆ.**

# ಶಿವಮೊಗ್ಗಕ್ಕೆ 'ವಲಸೆ' ಹೊರಟಿದ್ದ ಕೊಪ್ಪದ
# ಆಯುರ್ವೇದ ಕಾಲೇಜಿಗೆ ನಾಗರಿಕರ ದುಂಬಾಲು

**ಕೊಪ್ಪ : ಇಲ್ಲಿ ಕಳೆದ ೪ ವರ್ಷಗಳನ್ನು ಕಳೆದು ಇನ್ನು ಆಗುವುದಿಲ್ಲವೆಂದು ಶಿವಮೊಗ್ಗಕ್ಕೆ ವಲಸೆ ಹೊರಟಿದ್ದ ಆಯುರ್ವೇದ ಕಾಲೇಜನ್ನು ಸಾರ್ವಜನಿಕರು ದುಂಬಾಲು ಬಿದ್ದು ಇನ್ನೂ ೩ ತಿಂಗಳ ಅವಧಿಗೆ ಇಲ್ಲೇ ಉಳಿಸಿಕೊಂಡಿದ್ದಾರೆ.**

ಅಷ್ಟರೊಳಗೆ ಕಾಲೇಜಿಗೆ ಅಗತ್ಯವಾದ ಆಯುರ್ವೇದ ಆಸ್ಪತ್ರೆಯ ವ್ಯವಸ್ಥೆಯಾಗದಿದ್ದರೆ ಇಲ್ಲಿ ಆಯುರ್ವೇದ ಕಾಲೇಜು ಶಾಶ್ವತವಾಗಿ ಮುಚ್ಚಿ ಹೋಗುತ್ತದೆ.

### ಹುಸಿಯಾದ ಸೌಕರ್ಯಗಳು

ಯಾವುದೇ ವೈದ್ಯಕೀಯ ಕಾಲೇಜಿಗೆ ಸ್ವಂತ ಆಸ್ಪತ್ರೆ ಇರಬೇಕು. ಇಲ್ಲಿ ಕಾಲೇಜು ಆರಂಭವಾಗುವಾಗ ಅದರ ಸಂಸ್ಥಾಪಕ ಸಂಸ್ಥೆಯಾದ ಕೊಕ್ಕರ್ಣೆಯ ಕುಶಾಲ ಶೆಟ್ಟರ ವಿದ್ಯಾ ಸಂಸ್ಥೆ ಮತ್ತು ಎ ಎಲ್. ಎನ್. ರಾವ್ ಸ್ಮಾರಕ ಆಸ್ಪತ್ರೆಗಳು ಜಂಟಿಯಾಗಿ ಕೊಡಿಸಿತ್ತಲ್ಲ ಆಸ್ಪತ್ರೆಯನ್ನೇ ತೋರಿಸಿದ್ದವು.

ಆದರೆ ಅದನ್ನು ಕಳೆದ ವರ್ಷ ಅದರ ವ್ಯವಸ್ಥಾಪಕರಾದ ಶಂಕರ್ ಕಂಪೆನಿಯವರು ಮಣಿಪಾಲದ ಆಸ್ಪತ್ರೆಗೆ ವಹಿಸಿಕೊಟ್ಟಾಗ ಆಯುರ್ವೇದ ಕಾಲೇಜಿಗೆ ಆಸ್ಪತ್ರೆ ಸೌಕರ್ಯ ಇಲ್ಲವಾಯಿತು, ವಿದ್ಯಾರ್ಥಿಗಳಿಗೆ ೩ನೇ ವರ್ಷದಿಂದಲೇ ಆಸ್ಪತ್ರೆಯಲ್ಲಿ ಖುದ್ದು ರೋಗಿಗಳ ತಪಾಸಣೆ ಮತ್ತು ಚಿಕಿತ್ಸೆಯ ಅಗತ್ಯವಿದ್ದು, ಇಲ್ಲಿನ ಸರ್ಕಾರಿ ಆಸ್ಪತ್ರೆಯ ವೈದ್ಯಾಧಿಕಾರಿಗಳನ್ನು ಗೋಗರೆದು, ಅಲ್ಲಿ ವಿದ್ಯಾರ್ಥಿಗಳಿಗೆ ಪ್ರತ್ಯಕ್ಷ ತರಬೇತಿಗೆ ಏರ್ಪಾಡು ಮಾಡಿಕೊಳ್ಳಲಾಯಿತು. ಆದರೆ ಆಯುರ್ವೇದ ಮತ್ತು ಅಲೋಪತಿ ಬೇರೆ ಬೇರೆ ವಿಧಾನಗಳಾಗಿದ್ದು, ಇದರಿಂದ ವಿದ್ಯಾರ್ಥಿಗಳಿಗೆ ಅಂಥ ಪ್ರಯೋಜನವೇನೂ ಆಗಿಲ್ಲ.

### ವಿದ್ಯಾರ್ಥಿಗಳ ಪ್ರತಿಭಟನೆ

೩ನೇ ವರ್ಷದಲ್ಲೇ 'ಕ್ಲಿನಿಕಲ್' ಸೌಕರ್ಯ ಬೇಕಾಗಿದ್ದು ೪ನೇ ವರ್ಷ ಕಳೆಯುತ್ತ ಬಂದರೂ ಆಸ್ಪತ್ರೆ ಸೌಕರ್ಯ ದೊರಕಿಸದಿದ್ದುದಕ್ಕೆ ವಿದ್ಯಾರ್ಥಿಗಳು ಆಡಳಿತ ಮಂಡಳಿಗೆ ಪ್ರತಿಭಟನೆ ಸಲ್ಲಿಸತೊಡಗಿದ್ದಲ್ಲದೆ, ಕುವೆಂಪು ವಿಶ್ವವಿದ್ಯಾಲಯದ ವೈದ್ಯಕೀಯ ಸಲಹಾ ಸಮಿತಿಯೂ ಈ ಕಾಲೇಜಿಗೆ ಮಾನ್ಯತೆ ಮುಂದುವರಿಸಲು ತಕರಾರು ಮಾಡಿದಾಗ ಬಾಳೆಗಡಿಯಲ್ಲಿ ನೆಪ ಮಾತ್ರಕ್ಕೆ '೫ ಹಾಸಿಗೆಗಳ ಆಸ್ಪತ್ರೆ' ಎಂಬ ಬೋರ್ಡನ್ನು ಬಾಡಿಗೆ ಕಟ್ಟಡವೊಂದಕ್ಕೆ ಹಾಕಲಾಯಿತಾದರೂ, ಅದನ್ನು ಯಾರೂ ಆಸ್ಪತ್ರೆ ಎನ್ನುವುದಿಲ್ಲ. ರೋಗಿಗಳಂತೂ ಅಲ್ಲಿಗೆ ಬರುವುದೇ ಅಪರೂಪವಾಗಿತ್ತು.

### ಶಿವಮೊಗ್ಗಕ್ಕೆ ವಲಸೆಗೆ ತಡೆ

ಈ ಹಿನ್ನೆಲೆಯಲ್ಲಿ ಸಂಸ್ಥೆಯ 'ಮಾಲೀಕ'ರಾದ ಕುಶಲಶೆಟ್ಟರು ಕಾಲೇಜನ್ನು ಶಿವಮೊಗ್ಗದ ಶಿಕ್ಷಣ ಸಂಸ್ಥೆಯೊಂದಕ್ಕೆ 'ದುಬಾರಿ ಬೆಲೆಗೆ' ಮಾರಾಟ ಮಾಡಿದ್ದಾರಂತೆ, ಕಾಲೇಜು ಶಿವಮೊಗ್ಗಕ್ಕೆ ಎತ್ತಂಗಡಿಯಾಗುತ್ತಂತೆ ಎಂಬ ವರ್ತಮಾನ ಊರಲ್ಲಿ ಹರಡಿದಾಗ ಹಲವಾರು ವಿದ್ಯಾಪ್ರೇಮಿಗಳು ಅದನ್ನು ಇಲ್ಲೇ ಉಳಿಸಿಕೊಳ್ಳಲು ಮಾರ್ಗೋಪಾಯ ಹುಡುಕತೊಡಗಿದರು.

ಹೀಗಾಗಿ, ಫೆ. ೫ರಂದು ವಿ.ವಿ. ಸಲಹಾ ಸಮಿತಿ ಕಾಲೇಜಿಗೆ ಈ ವಿಚಾರವಾಗಿ 'ನಿರ್ಣಾಯಕ' ಭೇಟಿ ಕೊಟ್ಟಾಗ ಸಾರ್ವಜನಿಕರೂ ಅವರೊಂದಿಗೆ ಚರ್ಚೆ ನಡೆಸಿದರು. ಕುಶಲ ಶೆಟ್ಟರು ಹಾಗೂ ರಮೇಶ ರಾವ್ ಇವರಿಬ್ಬರೂ ಅಲ್ಲದೆ, ವಿದ್ಯಾರ್ಥಿಗಳು, ಅವರ ಕೆಲ ಪೋಷಕರು, ಸಾರ್ವಜನಿಕರು, ತಜ್ಞರು—ಎಲ್ಲರೂ ಸೇರಿದ್ದ ಈ ಸಭೆ ಸಮಸ್ಯೆಯನ್ನು ಕೂಲಂಕಷ ವಿಮರ್ಶಿಸಿತು.

"ವಿದ್ಯಾರ್ಥಿಗಳಿಗೆ ನಗರದ ಮೋಜಿನ ಜೀವನದ ಆಕರ್ಷಣೆ"ಗಿಂತ ಇಲ್ಲಿ ಅವರ ತರಬೇತಿಗೆ ಏನೇನೂ ಸೌಕರ್ಯ ಇಲ್ಲದಿರುವುದನ್ನು ಸ್ಥಳೀಯ ಸಾರ್ವಜನಿಕರು ಮನಗಂಡರು. ಅಂತೆಯೇ, ಒಮ್ಮೆ ಹೇಗೋ ಮಂಜೂರಾಗಿರುವ ಈ ವೈದ್ಯ ಕಾಲೇಜನ್ನು ಹೇಗಾದರೂ ಇಲ್ಲಿ ಉಳಿಸಿಕೊಳ್ಳಬೇಕೆಂಬ ಸಾರ್ವಜನಿಕರ ಕಳಕಳಿಯನ್ನು ವಿ. ವಿ. ತಜ್ಞರೂ ಒಪ್ಪಿದರು.

ಆದರೆ ಕುಶಲ ಶೆಟ್ಟರ ಮೇಲೆ ಮಾತ್ರ ಸಾರ್ವಜನಿಕರ ಆಕ್ರೋಶ ಉಕ್ಕಿಹರಿಯಿತು. ವಿದ್ಯಾರ್ಥಿಗಳಿಂದ ಲಕ್ಷಾಂತರ ರೂ. ಡೊನೇಶನ್ ಕಬಳಿಸಿ, ಯಾವ ಸೌಕರ್ಯವನ್ನೂ ಒದಗಿಸದೆ, ಕಡೆಗೆ ಸಂಸ್ಥೆಯನ್ನೇ ಹತ್ತಾರು ಲಕ್ಷ ರೂ.ಗಳಿಗೆ 'ಮಾರುವ' ಅವರ ವ್ಯಾಪಾರೀ ಹೀನತನವನ್ನು ಸಭೆಯಲ್ಲಿದ್ದ ಹಿರಿ-ಕಿರಿಯರೆನ್ನದೆ ಎಲ್ಲರೂ ಇನ್ನಿಲ್ಲದಂತೆ ಖಂಡಿಸಿದರು; ಕೆಲವು ಬಿಸಿ ರಕ್ತದವರು ತೋಳು ಕೂಡ ಮಡಿಚಿದ್ದುಂಟು.

ಅಂತೂ ಎಲ್ಲರ ಕಳಕಳಿಯ, ಸಾವಧಾನದ ಪ್ರಯತ್ನದಿಂದ ಕಡೆಗೆ ಮೂಡಿದ ಅಭಿಪ್ರಾಯವೇನೆಂದರೆ :

ತಜ್ಞರ ಸಮಿತಿ ವಿ.ವಿ. ನಿಲಯಕ್ಕೆ ತನ್ನ ಶಿಫಾರ್ಸಿಯಾ ವರದಿ ಕಳಿಸಲು ಇನ್ನೂ ೩ ತಿಂಗಳು ಕಾಲಾವಕಾಶ ತೆಗೆದುಕೊಳ್ಳುತ್ತದೆ. ಅಷ್ಟರೊಳಗೆ ಸಮರ್ಪಕವಾದ ಆಯುರ್ವೇದ ಆಸ್ಪತ್ರೆಯ ವ್ಯವಸ್ಥೆಯಾಗಬೇಕು. ಆಸ್ಪತ್ರೆಯಾದರೆ ಸಾಲದು, ಅಲ್ಲಿಗೆ ಆಯುರ್ವೇದ ಮಾಧ್ಯಮದ ಚಿಕಿತ್ಸೆ ಪಡೆಯುವ ಮನಸ್ಸುಳ್ಳ ರೋಗಿಗಳೂ ಸಾಕಷ್ಟು ಸಂಖ್ಯೆಯಲ್ಲಿ ಬರುವಂತೆ ಸಾರ್ವಜನಿಕರು ಪ್ರಯತ್ನ ಮಾಡಬೇಕು

ಹಾಗಾದಲ್ಲಿ ೩ ಮತ್ತು ೪ನೇ ವರ್ಷದ ವಿದ್ಯಾರ್ಥಿಗಳಿಗೆ ಕ್ಲಿನಿಕಲ್ ಶಿಕ್ಷಣಕ್ಕೆ ತತ್ಕಾಲಕ್ಕೆ ಬೇರೆ ಕಡೆ ವ್ಯವಸ್ಥೆ ಮಾಡಿಯಾದರೂ ಇಲ್ಲಿ ಸಂಸ್ಥೆ ಉಳಿಯುವಂತೆ ಮಾಡಬಹುದು ಆದಾಗದಿದ್ದರೆ ಮಾತ್ರ ವಿ. ವಿ. ನಿಲಯವೇ ಈ ವಿದ್ಯಾರ್ಥಿಗಳಿಗೆ ಬೇರೆ ವ್ಯವಸ್ಥೆ ಕಲ್ಪಿಸಿ, ಇಲ್ಲಿನ ಕಾಲೇಜಿಗೆ ಮಾನ್ಯತೆ ಹಿಂತೆಗೆದುಕೊಳ್ಳುತ್ತದೆ.

ಇತ್ತ, ಸದ್ಯ ೩ ತಿಂಗಳವರೆಗಿನ ವ್ಯವಸ್ಥೆಯನ್ನು ಒದಗಿಸಲು ರಮೇಶ್‌ರಾವ್ ಒಪ್ಪಿಕೊಂಡಿದ್ದಾರೆ. ಅಷ್ಟರೊಳಗೆ ಸಾರ್ವಜನಿಕರ ಖಚಿತ ಸಹಕಾರ ಸಿಗಬೇಕು. ಒಂದು ವಿದ್ಯಾಸಂಸ್ಥೆಯನ್ನು ಸ್ಥಾಪಿಸಿಯೋ ಅಥವಾ ಹರಿಹರಪುರ ಮಠಾಧೀಶರೋ ಈ ಕಾಲೇಜನ್ನು ನಡೆಸುವಂತೆ ಪ್ರಯತ್ನಗಳು ನಡೆಯುತ್ತಿವೆ.

ಬೇರೆಯವರನ್ನು ಆಯುರ್ವೇದ ಆಸ್ಪತ್ರೆಗೆ ಹೋಗಲು ಹೇಳಿ, ತಾವು, ತಮ್ಮ ಮನೆಮಂದಿ ಮಾತ್ರ ಖಾಸಗಿ ಇಂಗ್ಲೀಷ್ ವೈದ್ಯರಲ್ಲಿಗೇ ಹೋಗುವ ಮುಂದಾಳುಗಳಿಗಲ್ಲವಾದರೆ ಈ ಕಾಲೇಜು ಉಳಿಯಬಹುದು ?

ಕರಿಮನೆ ಭೂ ಬ್ಯಾಂಕ್ — ಹರಿಜನರ ಸಾಲ ಸೌಲಭ್ಯ ದುರುಪಯೋಗದ ವಿವಾದ :

# ಅಧ್ಯಕ್ಷರ ವೈಯಕ್ತಿಕ ಸಚ್ಚರಿತ್ರೆಗೇ ತಟ್ಟಲಿರುವ ಕಳಂಕ

ವಿವಿಧ ರೀತಿಯ ಬ್ಯಾಂಕ್ ಮತ್ತು ... ಸಾಲಗಳನ್ನು ದುರುಪಯೋಗ ಪಡಿಸಿಕೊಳ್ಳುವುದು ಅಪರೂಪವೇನಲ್ಲ. ಮದುವೆ ಖರ್ಚಿಗೋ, ವಾಹನ ಕೊಳ್ಳಲಿಕ್ಕೋ ಬೇಕಾಗಿ ಕೃಷಿ-ಅಭಿವೃದ್ಧಿ ಸಾಲಗಳನ್ನು ಪಡೆದು 'ಸದುಪಯೋಗ'ಪಡಿಸಿಕೊಳ್ಳುವುದು ಈಗ ಬಹಿರಂಗ 'ವ್ಯವಹಾರ'ವೇ ಆಗಿದೆ.

ಆದರೆ ಬಡವರ, ಹರಿಜನ-ಗಿರಿಜನರ ಹೆಸರಿನಲ್ಲಿ ಸಾಲ-ಸೌಲಭ್ಯ ಕೊಡಿಸಿದಂತೆ ಮಾಡಿ, ಯಾರೋ ಉಳ್ಳವರು-ಹೊಟ್ಟೆ ತುಂಬಿದವರು ಅವುಗಳನ್ನು ಹಂಚಿಕೊಂಡು ತಿನ್ನುವಂತಹ ಪ್ರಕರಣಗಳೂ ಬೇಕಾದಷ್ಟು ನಡೆದಿರುವುದು, ಇಂದಿಗೂ ನಡೆಯುತ್ತಿರುವುದು ಮಾತ್ರ ಬಹಳ ಖಂಡನಾರ್ಹ ವಿಚಾರ.

ಜಿಲ್ಲೆಯ ಪ್ರಸಿದ್ಧ ಭೂ ಅಭಿವೃದ್ಧಿ ಬ್ಯಾಂಕ್‌ಗಳಲ್ಲೊಂದಾಗಿ, ಹಲವು ಬಾರಿ ರಾಜ್ಯ ಮಟ್ಟದ ಪ್ರಶಸ್ತಿ ಗಳಿಸಿರುವ ಕರಿಮನೆ ಪ್ರಾ. ಸ. ಕೃ. ಗ್ರಾ. ಅ. ಬ್ಯಾಂಕಿನಲ್ಲಿ ಇಂಥದೊಂದು ಪ್ರಕರಣ ಬಹಿರಂಗವಾದ ಮೇಲೆ ಬಹಳಷ್ಟು ತೆರೆಮರೆಯ ಚಟುವಟಿಕೆ ನಡೆಯುತ್ತಿರುವುದಾಗಿ ತಿಳಿದು ಬಂದಿದೆ.

ಅವುಗಳಲ್ಲಿ ಎಲ್ಲಕ್ಕಿಂತ ಮುಖ್ಯವಾದುವುಗಳೆಂದರೆ, ಸಾಕ್ಷಿ-ಪುರಾವೆಗಳನ್ನು ಇಲ್ಲವಾಗಿಸುವುದು ಹಾಗೂ ಸಮಗ್ರ ಮತ್ತು ವಸ್ತುನಿಷ್ಠ ತನಿಖೆಯೇ ನಡೆಯದಂತೆ ನೋಡಿಕೊಳ್ಳುವುದು. ಇಂಥ ವಿವಾದಾತ್ಮಕ ವಿಚಾರವೊಂದು ಬೆಳಕಿಗೆ ಬಂದಾಗ, ಅದರ ಕೂಲಂಕಷ ತನಿಖೆಯನ್ನು ಸಂಬಂಧಪಟ್ಟ ಮೇಲಧಿಕಾರಿಗಳೊಂದಿಗೆ ಪಟ್ಟುಹಿಡಿದಾದರೂ ಮಾಡಿಸಿ, ತಮ್ಮ ಸಂಸ್ಥೆಯ ಮತ್ತು ತಮ್ಮ ಸ್ಥಾನದ ಈ ಎರಡೂ ಗೌರವಗಳನ್ನು ರಕ್ಷಿಸಿಕೊಳ್ಳಬೇಕಾದ ಸಂಸ್ಥೆಯ ಅಧ್ಯಕ್ಷರೇ ಆ ಹೊಣೆಯಿಂದ ಜಾರಿಕೊಳ್ಳುವ ಯತ್ನ ಎದ್ದು ಕಾಣುತ್ತಿದೆ.

ಕರಿಮನೆ ಬ್ಯಾಂಕ್ ಅಧ್ಯಕ್ಷ ಸುಧಾನಂದ ಅವರು ಮೇಲ್ಕಂಡ ಆರೋಪವನ್ನು ನಿರಾಕರಿಸಿ ಪತ್ರಿಕೆಗಳಿಗೆ ನೀಡಿದ ಹೇಳಿಕೆಗೆ ಇನ್ನೇನು ಬೇರೆ ರೀತಿಯ ಅರ್ಥ ಕಲ್ಪಿಸಲು ಸಾಧ್ಯವಿಲ್ಲ. ಮೂವರು 'ಫಲಾನುಭವಿ'ಗಳ ಪೈಕಿ ಭೈರಯ್ಯ ಬಿನ್ ಚೌಡಯ್ಯ ಎಂಬ ಒಬ್ಬ 'ಫಲಾನುಭವಿ'ಯ 'ಹೇಳಿಕೆ'ಯನ್ನೇ ಆಧಾರವಾಗಿಟ್ಟುಕೊಂಡು, ಹಣ ದುರುಪಯೋಗ ನಡೆದಿಲ್ಲವೆಂದೂ, ಆರೋಪ ದುರುದ್ದೇಶಪೂರಿತವೆಂದೂ ಅವರು ಹೇಳಿಕೆ ನೀಡಿದ್ದಾರೆ. ಅಲ್ಲದೆ, ತಮ್ಮ ಬ್ಯಾಂಕಿನ ಈ ಹಗರಣದ ಬಗ್ಗೆ ತಾವೇ 'ತನಿಖೆ' ಮಾಡಿಕೊಂಡಿದ್ದಾರೆ !

ಹೋಗಲಿ ; ಈ ಫಲಾನುಭವಿಗಳಿಗೆ ಎತ್ತು, ಎಮ್ಮೆಗಳನ್ನು ಮಾರಿದ್ದಾಗಿ ಹೇಳಿಕೊಳ್ಳುವ ಅಬ್ಬಲಮಕ್ಕಿ ಚಂದ್ರಶೇಖರ್ ಅವರು ಎತ್ತು-ಎಮ್ಮೆಯ ವ್ಯಾಪಾರಿಯಲ್ಲ; ಗಾಡಿ ಕೊಟ್ಟಿದ್ದಾಗಿ ಚೆಕ್ ಪಡೆದಿರುವ ಸದಾಶಿವ ಆಚಾರಿಯವರು ಗಾಡಿ ತಯಾರಿಸುವವರೂ ಅಲ್ಲ. ಹೆಚ್ಚೆಂದರೆ ಗಾಡಿಗಳ ರಿಪೇರಿ ಮಾತ್ರ ಮಾಡುವವರು. ಆದರೆ ಇವರಿಬ್ಬರೂ ಮೇಲ್ಕಂಡ ವಹಿವಾಟು ನಡೆಸುವವರಂತೆ ೫೦ ಕ್ಕೂ ಹೆಚ್ಚು ಚೆಕ್‌ನ್ನು ಈ ಬ್ಯಾಂಕಿನಿಂದ ಪಡೆದಿರುವರೆನ್ನಲಾಗಿದ್ದು, ಇದು ತನಿಖೆಗೆ ಅರ್ಹವಾದ ವಿಚಾರವೆಂದು ಅಧ್ಯಕ್ಷರಿಗೆ ಅನ್ನಿಸದಿರುವುದು ಸೋಜಿಗದ ಸಂಗತಿ!

ಅಧ್ಯಕ್ಷರು ಮುಂದುವರಿದು, "....ಖರೀದಿ ಸಮಿತಿಯ ಸದಸ್ಯರೂ ಈ ಬಗ್ಗೆ ಒಪ್ಪಿಗೆ ನೀಡಿದ್ದಾರೆ" ಎಂದಿದ್ದಾರೆ. ಆದರೆ ಖರೀದಿ ಸಮಿತಿಯಲ್ಲಿ ಬ್ಯಾಂಕ್ ಅಧಿಕಾರಿವರ್ಗ, ಪಶುವೈದ್ಯರಲ್ಲದೆ ಉಳಿದ ಏಕೈಕ ನಿರ್ದೇಶಕ-ಸದಸ್ಯರಾದ ಎಸ್. ಕೆ. ಸುಬ್ರಮಣ್ಯ ಹೆಬ್ಬಾರ್ 'ಮುಂಜಾವು'ಗೆ ಹೀಗೆ ತಿಳಿಸಿದ್ದಾರೆ.

"೩ ವರ್ಷದಿಂದ ಖರೀದಿ ಸಮಿತಿ ಸದಸ್ಯನಾಗಿದ್ದರೂ, ಯಾವ ಖರೀದಿಯ ಸಮಯದಲ್ಲೂ ನಾನು ಖುದ್ದು ಹಾಜರಿರಲಿಲ್ಲ; ಯಾವ ಪಾರ್ಟಿಗಳನ್ನೂ ನೋಡಿಲ್ಲ. ನಮ್ಮಲ್ಲಿಂದ ಸುಮಾರು ೨೫ ಕಿ ಮೀ. ದೂರ ಅದಕ್ಕಾಗಿ ಹೋಗಲು ಆಗುವುದಿಲ್ಲ. ಬ್ಯಾಂಕ್ ಸಿಬ್ಬಂದಿ ಬಗ್ಗೆ ಏನೂ ಅಪನಂಬಿಕೆ ಇರದಿದ್ದುದರಿಂದ ವಾರಕ್ಕೋ ಹದಿನೈದು ದಿನಕ್ಕೋ ಒಮ್ಮೆ ಆ ಕಡೆ ಹೋದಾಗ ದಾಖಲೆಗಳಿಗೆ ಸಹಿ ಮಾಡಿದ್ದೇನೆ...."

ರಾಜ್ಯ-ರಾಷ್ಟ್ರ ಮಟ್ಟಗಳಲ್ಲಿ ಉತ್ತಮ ಹೆಸರು ಪಡೆದಿರುವ ತಮ್ಮ ಬ್ಯಾಂಕಿನ ಬಗ್ಗೆ ಇವರಿಗಿದ್ದ ಪೂರ್ಣ ನಂಬಿಕೆ ಹೀಗೆ ದುರುಪಯೋಗವಾದಂತೆ ಎನ್ನಿಸುತ್ತದೆ.

ಬ್ಯಾಂಕಿನ ಉನ್ನತ ತನಿಖಾ ತಂಡದಿಂದ, ಇನ್ಶೂರೆನ್ಸ್ ಕಂಪೆನಿಯಿಂದ ಹಾಗೂ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ —ಹೀಗೆ ೩ ವಿಧದ ತನಿಖೆಗಳು ನಡೆಯುತ್ತಿರುವುದಾಗಿ ತಿಳಿದು ಬರುತ್ತದೆ. ಈ ತನಿಖೆಗಳಲ್ಲೇ ಕೆಲವು (ಉದಾ: ಬ್ಯಾಂಕ್ ತನಿಖಾ ತಂಡದ್ದು) ಶಂಕಾಸ್ಪದವಾಗಿ ನಡೆದಿರುವ ಲಕ್ಷಣಗಳಿರುವುದು ಒಂದೆಡೆಗಿರಲಿ; ಹೀಗೆ ತನಿಖೆ ನಡೆಯುತ್ತಿರುವಾಗಲೇ ಅಧ್ಯಕ್ಷರು ತಾನು ಕೂಲಂಕಷ ತನಿಖೆ ಮಾಡಿರುವುದಾಗಿಯೂ, ಬ್ಯಾಂಕ್ ಸಿಬ್ಬಂದಿ ನಿರ್ದೋಷಿಗಳೆಂದೂ ಘೋಷಿಸುವ ತರಾತುರಿ ಏಕೆ ?

ಇವರ ಜೊತೆಗೆ ಇನ್ನೂ ಪ್ರಚಲಿತ ರಾಜಕಾರಣವೂ ಸೇರಿಕೊಂಡರೆ ತನಿಖೆ ನಡೆದಂತೆಯೇ, ತಪ್ಪಿತಸ್ಥರಿಗೆ ಶಿಕ್ಷೆ ಆದಂತೆಯೇ! ಎಲ್ಲ ಸೇರಿ, ಕಡೆಗೆ ಆ 'ವಿಫಲಾನುಭವಿ'ಗಳನ್ನೇ ದೋಷಿಗಳನ್ನಾಗಿ ಮಾಡಿ ಶಿಕ್ಷೆಗೆ, ದಂಡಕ್ಕೆ ಈಡು ಮಾಡಿದರೂ ಆಶ್ಚರ್ಯವಿಲ್ಲ.

ಬೇರೆ ಯಾರು ಏನೇ ಆಗಿರಲಿ; ಅಧ್ಯಕ್ಷ ಸುಧಾನಂದ ಅವರಾದರೂ ಇಂಥ ಎಲ್ಲ 'ವ್ಯವಹಾರಗಳ' ಬಗ್ಗೆ ನಿಷ್ಪಕ್ಷಪಾತವಾಗಿ ತನಿಖೆ ನಡೆಯುವಂತೆ ಮುತುವರ್ಜಿ ವಹಿಸಿ, ವೈಯಕ್ತಿಕವಾಗಿ ತಮ್ಮ ಸ್ವಚ್ಛತೆಯನ್ನಾದರೂ ಸಾಬೀತುಪಡಿಸಬೇಕಾಗುತ್ತದೆ. ಇಲ್ಲವಾದರೆ, ಮೊನ್ನೆ ಶೃಂಗೇರಿಯಲ್ಲಿ ಹಿರಿಯ ರಾಜಕಾರಣಿಯೊಬ್ಬರು-"ಏನ್ರೋ ! ಎಲ್ಲ ಗುಲ್ಲೆಬ್ಬಿಸಿ ಗಬ್ಬೆಬ್ಬಿಸಿ ಬಿಟ್ಟಿದ್ದೀರಲ್ಲಾ?" ಎಂದಾಗ ಉತ್ತರಿಸಲಾಗದೆ ತಲೆ ಕೆಳಗೆ ಹಾಕಿದಂತೆ, ಹೋದಲ್ಲಿ-ಬಂದಲ್ಲಿ ತಲೆ ತಗ್ಗಿಸುವ ಪ್ರಸಂಗ ಎದುರಾಗದಿರದು.

ಅತ್ತ ಫಲಾನುಭವಿಗಳಾಗಬೇಕಿದ್ದವರೂ ಸಹ ಅದರ ಬದಲು "ಬಲಿಪಶು"ಗಳಾಗುತ್ತ ಹೋಗುವ ಹೊಣೆಯೂ ಇವರದೇ ಆಗುತ್ತದೆ.

ಇದಕ್ಕೆಲ್ಲ ಪರಿಹಾರವೊಂದೇ- ನಿಷ್ಪಕ್ಷಪಾತವಾದ, ರಾಜಕೀಯ ರಹಿತವಾದ ಕೂಲಂಕಷ ತನಿಖೆ ಮಾತ್ರ. ಇದನ್ನವರು ಅರಿತುಕೊಳ್ಳಲೆಂಬುದಷ್ಟೇ ನಮ್ಮ ಆಶಯ.

—ಸಂಪಾದಕ.

## ನಿರುದ್ಯೋಗಿ ಪದವೀಧರರಿಗೆ ಸ್ಟೈಪೆಂಡರಿ ಆಮಿಷ—ವಂಚನೆಯ ಎಚ್ಚರಿಕೆ

ಬೆಂಗಳೂರಿನ "ನಿರುದ್ಯೋಗಿ ಪದವೀಧರರ ಸಂಘ" ಎಂಬ ಲೆಟರ್ ಹೆಡ್‌ನಲ್ಲಿ ವಿವಿಧ ಕಡೆಯ ನಿರುದ್ಯೋಗಿ ಪದವೀಧರರಿಗೆ ಒಂದು ಮುದ್ರಿತ ಪತ್ರ ಕಳಿಸಿ, ಹಣ ಲಪಟಾಯಿಸುವ ಯತ್ನವೊಂದರ ಬಗ್ಗೆ ತೀರ್ಥಹಳ್ಳಿ ತಾಲ್ಲೂಕಿನಿಂದ ವರದಿಯಾಗಿದೆ.

ನಿರುದ್ಯೋಗ ಸಂಘವು ನಿರುದ್ಯೋಗಿಗಳಿಗೆ ಈ ಹಿಂದೆ ಸರ್ಕಾರವು ಸ್ಟೈಫಂಡರಿ ಕೊಟ್ಟ ಹಿನ್ನೆಲೆಯಲ್ಲಿ ಈಗಲೂ ಸಹಾ ನಿರುದ್ಯೋಗಿಗಳಿಗೆ ಸ್ಟೈಫಂಡರಿ ಕಲ್ಪಿಸಿಕೊಡಬೇಕು ಎಂದು ರಾಜ್ಯ ಶ್ರೇಷ್ಠ ನ್ಯಾಯಾಲಯವನ್ನು ಮೊರೆ ಹೋಗಿತ್ತು.

ಶ್ರೇಷ್ಠ ನ್ಯಾಯಾಲಯದ ತೀರ್ಪಿನಂತೆ, ಶೇ. ೬೦ರಷ್ಟು ಈಗ ಇರುವ ನಿರುದ್ಯೋಗಿಗಳಿಗೆ ಸ್ಟೈಫೆಂಡರಿ ಕೊಡಬೇಕು ಎಂದೂ, ಇದರ ಆಯ್ಕೆಯನ್ನು ಸದರಿ ನಿರುದ್ಯೋಗಿಗಳ ಸಂಘವೇ ಗುರುತಿಸಿ ನಿರುದ್ಯೋಗಿಗಳ ಆಯ್ಕೆಯ ಹೆಸರುಗಳನ್ನು ತಾ॥ ೩೧-೧೨-೮೦ರ ಒಳಗಾಗಿ ಆಯ್ಕೆಯ ಪಟ್ಟಿಯನ್ನು ಕೊಡಬೇಕು ಎಂದೂ ಆದೇಶಿಸಿದೆ. ವಿಶ್ವವಿದ್ಯಾಲಯದಿಂದ ನಿಮ್ಮ ಎಲ್ಲಾ ದಾಖಲಾತಿಗಳನ್ನು ಗುರುತಿಸಿಕೊಳ್ಳಲಾಗಿದೆ. ನೀವು ಸ್ಟೈಪಂಡರಿಗೆ ಅರ್ಹರೆಂದು ಆಯ್ಕೆ ಆಗಿರುವುದನ್ನು ಅಭಿನಂದಿಸುತ್ತೇವೆ. ಪದವೀಧರರಿಗೆ ಶೇ ೪೦ರಷ್ಟು, ಪದವಿ ಕೋರ್ಸ್ ಮುಗಿದವರಿಗೆ ಶೇ. ೨೦ರಷ್ಟು ಅವಕಾಶವನ್ನು ಕಲ್ಪಿಸಿಕೊಡಲಾಗಿದೆ.

ದಾಖಲಾತಿಯ ವೆಚ್ಚ ಮತ್ತು ಸಂಘದ ಸದಸ್ಯತ್ವದ ಫೀ ಇತ್ಯಾದಿಗಳಿಗಾಗಿ; ಪದವೀಧರರಿಗೆ ರೂಪಾಯಿ ೨೫೦-೦೦, ಪದವಿ ಕೋರ್ಸ್ ಮುಗಿದಿದ್ದರೆ ರೂಪಾಯಿ ೨೦೦ ಈ ಮೊತ್ತವನು ಈ ಕೆಳಕಂಡ ವಿಳಾಸಕ್ಕೆ ತಾ ೨೮-೧೨-೮೦ರೊಳಗೆ ಎಂ ಒ. ಕಳುಹಿಸಬೇಕು :

ಜೆ. ವಿಜಯಕುಮಾರ್, ಚಂಗಮರ ಜ್ ನಿಲಯ, ಸಪೋಟ ಗಾರ್ಡನ್, ನಂ. ೪೪/೪, ಜಯನಗರ, ೮ನೇ ಬ್ಲಾಕ್, ಬೆಂಗಳೂರು-೫೬೦೦೮೨.

ವಿಷಯ ಸೂಚನೆ : ಮೇಲೆ ಹೇಳಿರುವ ದಿನಾಂಕದಂದು ಎಂ ಒ. ಹಣ ಕಳುಹಿಸದಿದ್ದರೆ ಆಯ್ಕೆಯ ಹೆಸರನ್ನು ತೆಗೆದು ಹಾಕಲಾಗುವುದು. ಹಾಗೂ ನಿಯಮಿತ ನಿರುದ್ಯೋಗಿಗಳಿಗೆ ಮಾತ್ರ ಸ್ಟೈಪಂಡರಿ ಕೊಡಲಾಗುವುದರಿಂದ ವಿಷಯವನ್ನು ಗೌಪ್ಯವಾಗಿಡಬೇಕು. ಪತ್ರ ವ್ಯವಹಾರ ಇತ್ಯಾದಿಗಳಿಗೆ ಅವಕಾಶವಿಲ್ಲ. ಹೆಚ್ಚಿನ ವಿವರಗಳನ್ನು ನಂತರ ತಿಳಿಸಲಾಗುವುದು. ವಂದನೆಗಳೊಂದಿಗೆ

ಕಾರ್ಯದರ್ಶಿ.

ಎಂಬುದಾಗಿ ಕಳಪತ್ರದಲ್ಲಿ ತಿಳಿಸಲಾಗಿರುತ್ತದೆ.

ಈ ಬಗ್ಗೆ ನಿರುದ್ಯೋಗಿ ಪದವೀಧರರು ಎಚ್ಚರ ವಹಿಸಬೇಕೆಂದು ಅರಗದ ಬಳಗೋಡಿನ ಬಿ.ಎಂ ಧರ್ಮಯ್ಯ ಎಂಬ ಪದವೀಧರರು ತಿಳಿಸಿದ್ದಾರೆ.

('ಬೃಹಸ್ಪತಿವಾಣಿ'ಯಿಂದ)

## "ಡಿ. ವಿ. ಜಿ. ಬದುಕು-ಬರಹ" ಉಪನ್ಯಾಸ

ಶೃಂಗೇರಿ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ಕನ್ನಡದ ಭೀಷ್ಮ ಡಿ. ವಿ. ಗುಂಡಪ್ಪನವರ ಬದುಕು ಬರಹ ಕುರಿತ ಉಪನ್ಯಾಸ ಕಾರ್ಯಕ್ರಮವನ್ನು ಈಚೆಗೆ ಶೃಂಗೇರಿಯಲ್ಲಿ ಏರ್ಪಡಿಸಲಾಗಿತ್ತು.

ಉಪನ್ಯಾಸಕರಾಗಿ ಆಗಮಿಸಿದ್ದ ಡಿ.ವಿ.ಜಿ ಯವರ ನಿಕಟವರ್ತಿಗಳಾದ ಡಿ. ಆರ್. ವೆಂಕಟರಮಣನ್ ಅವರು ಡಿ ವಿ.ಜಿ. ಯವರನ್ನು ಕುರಿತು ಮಾತನಾಡುತ್ತಾ, ಇಂಗ್ಲಿಷ್, ಕನ್ನಡ, ಸಂಸ್ಕೃತ ಭಾಷೆಗಳಲ್ಲಿ ಉತ್ತಮ ಪಾಂಡಿತ್ಯ ಪಡೆದಿದ್ದ ಡಿವಿಜಿಯವರು ನಿತ್ಯವೂ ಸಾಹಿತ್ಯ ಚರ್ಚೆ ನಡೆಸುತ್ತಿದ್ದರು. ಇಂತಹ ಚರ್ಚೆಗಳು ಮಾನವೀಕ ವಿಷಯಗಳಿಗೆ ಸಂಬಂಧಿಸಿದವುಗಳಾಗಿದ್ದು, ಅವು ಬದುಕಿನ ಮೌಲಿಕ ಅಂಶಗಳನ್ನು ಪ್ರತಿಬಿಂಬಿಸುತ್ತಿದ್ದವು. ಅಂತಹ ವಿಷಯಗಳ ಬಗ್ಗೆ ಆಳವಾದ ಜ್ಞಾನದಿಂದ ಚರ್ಚಿಸಲಾಗುತ್ತಿತ್ತು ಎಂದರು.

ಮಂಕುತಿಮ್ಮನ ಕಗ್ಗ, ಉಮರನ ಒಸಗೆ, ಮರುಳಮುನಿಯನ ಕಗ್ಗ, ಸಾಹಿತ್ಯ ಸೌಂದರ್ಯ ಮೊದಲಾದ ಕೃತಿ ರಚಿಸಿ "ಕನ್ನಡದ ಭೀಷ್ಮ"ರೆಂದೇ ಹೆಸರಾದ ಡಿ ವಿ. ಜಿ. ಅವರಿಂದ ಕನ್ನಡಕ್ಕೆ ಅಮೂಲ್ಯ ಸೇವೆ ಸಂದಿದೆ ಎಂದರು.

ಅಧ್ಯಕ್ಷರಾದ ಡಾ॥ ಹುಲ್ಸೆ ಮಂಜಪ್ಪಗೌಡರವರು ಹಿರಿಯರ ಒಡನಾಟ ಹಾಲ್ಜೇನು ಸವಿದಂತೆ. ಹಿರಿಯ ವ್ಯಕ್ತಿಗಳ ಜೊತೆಗೆ ಅನುಭವಸ್ಥರೂ ಆದ ವೆಂಕಟರಮಣನ್ ಅವರ ನುಡಿಗಳಲ್ಲಿ ಸ್ವತಃ ಡಿ ವಿ ಜಿ. ಯವರನ್ನೇ ದರ್ಶಿಸಿದ ಅನುಭವವಾಗುತ್ತದೆ ಎಂದರು.

ಟಿ ಎಸ್. ವೆಂಕಣ್ಣಯ್ಯ ಸ್ವಾಗತಿಸಿ ಕೆ. ಪುಟ್ಟಯ್ಯ ವಂದಿಸಿದರು.

(ವರದಿ : ದ. ರಾಜಣ್ಣ)

## ಓದುಗರ ಪತ್ರಗಳು

### ವಾಚನಾಲಯ ವ್ಯವಸ್ಥೆ

ಪ್ರಿಯರೆ,

ಹರಿಹರಪುರದ ಮಂಡಲ ಪಂಚಾಯಿತಿ ಕಡೆಯಿಂದ ನಡೆಯುತ್ತಿರುವ ವಾಚನಾಲಯವು ಈಚೆಗೆ ಮತ್ತಷ್ಟು ಸುವ್ಯವಸ್ಥಿತಗೊಂಡಿದೆ. ಪಂಚಾಯಿತಿ ವತಿಯಿಂದ ಎಲ್ಲ ಪ್ರಮುಖ ಕನ್ನಡ ದಿನ/ವಾರ/ಪಕ್ಷ/ಮಾಸ ಪತ್ರಿಕೆಗಳನ್ನು ತರಿಸಲಾಗುತ್ತಿದೆ. ಜೊತೆಗೆ ಸ್ಥಳೀಯರಾದ ಸುಧಾಕರ್, ಸುಂದರ ಶೆಟ್ಟಿ ಮತ್ತು ಮಿತ್ರರು ತಮ್ಮ ಸ್ವಂತ ಖರ್ಚಿನಲ್ಲಿ ಪ್ರಮುಖ ಇಂಗ್ಲಿಷ್ ವಾರ/ಪಕ್ಷ/ಮಾಸ ಪತ್ರಿಕೆಗಳೂ ಇಲ್ಲಿ ಲಭ್ಯವಾಗುವಂತೆ ಮಾಡಿದ್ದಾರೆ.

ಇದರ ಉಪಯೋಗವನ್ನು ಸಾರ್ವಜನಿಕರು ಹೆಚ್ಚಾಗಿ ಪಡೆದುಕೊಳ್ಳಬೇಕೆಂದು ಮಂಡಲ ಪ್ರಧಾನರು ಮತ್ತಿತರ ಮಿತ್ರರು ಆಶಿಸಿದ್ದಾರೆ.

—ಬಿ. ರಮೇಶ ರಾವ್,
ಹರಿಹರಪುರ

## ಶಂಕರ್ ಸಾರಿಗೆ ವ್ಯವಸ್ಥೆ ಸೌಹಾರ್ದದಿಂದ ಸುಧಾರಿಸಲಿ

ಪ್ರಿಯರೆ,

ಮಲೆನಾಡಿನ ಜನತೆ ಸದ್ಯದಲ್ಲಿ ಕೊಲ್ಲಿ ರಾಷ್ಟ್ರದಲ್ಲಿ ನಡೆಯುತ್ತಿರುವ ಭಯಂಕರ ಯುದ್ಧದ ಪರಿಣಾಮಕ್ಕಿಂತಲೂ ಮಿಗಿಲಾದ ಕಷ್ಟಗಳನ್ನು ಸಾರಿಗೆ ವ್ಯವಸ್ಥೆಯ ಸಂಪೂರ್ಣ ಕುಸಿತದಿಂದ ಅನುಭವಿಸುತ್ತಿದ್ದಾರೆ. ಮಲೆನಾಡಿನ ಮನೆ ಮಾತಾಗಿದ್ದ ಶಂಕರ್ ಬಸ್‌ಗಳು ನಿಂತು ೫೫ ದಿನಗಳಾಗಿ ಹೋದವು. (ಈ ಬರಹ ಅಚ್ಚಾಗುವವರೆಗೂ) ಶೃಂಗೇರಿ, ಕೊಪ್ಪ, ನ. ರಾ. ಪುರ, ತೀರ್ಥಹಳ್ಳಿ ತಾ॥ಗಳ ಅಸಂಖ್ಯಾತ ಪ್ರಯಾಣಿಕರು—ಮುಖ್ಯವಾಗಿ ವಿದ್ಯಾರ್ಥಿಗಳು, ರೋಗಿಗಳು, ಮಧ್ಯಮ ಮತ್ತು ಬಡ ವರ್ಗದವರು, ಕೃಷಿಪಿ ಜನರು ಮುಂತಾದವರ ಪಾಡು ಅನುಭವಿಸಿದವರಿಗೇ ಗೊತ್ತು.

೬೫ ವರ್ಷಗಳ ಹಿಂದೆ ಈ ಸಂಸ್ಥೆಯನ್ನು ಆರಂಭಿಸಿ ೩೦ ವರ್ಷ ಕಾಲ ಅದನ್ನು ಜನಾನುರಾಗಿಯಾಗಿ ನಡೆಸಿದ ದಿ॥ ದೇವೇಗೌಡರನ್ನಾಗಲಿ, ಅವರಿಂದ ಹಸ್ತಾಂತರಿಸಿಕೊಂಡು ಸತತ ಅಭಿವೃದ್ಧಿ ಪಥದಲ್ಲಿ ನಡೆಸಿದ ದಿ॥ ಆರೂರು ಲಕ್ಷ್ಮೀನಾರಾಯಣರನ್ನಾಗಲಿ, ಅವರ ಮತ್ತು ಅವರ ಮಕ್ಕಳ ಸಹಾಯಕರಾಗಿ ದುಡಿದ ದಿ। ಆರ್. ಎ. ಕಾಮತರನ್ನಾಗಲಿ ಜನ ಇಂದಿಗೂ ಪ್ರೀತಿಯಿಂದ ಸ್ಮರಿಸುತ್ತಿದ್ದಾರೆ.

ಈಗ ಸಂಸ್ಥೆಯ ಮಾಲೀಕ ವರ್ಗ ಮತ್ತು ಕಾರ್ಮಿಕ ವರ್ಗಗಳ ನಡುವಿನ ತಿಕ್ಕಾಟದಲ್ಲಿ, 'ಗಂಡ-ಹೆಂಡಿರ ಜಗಳದಲ್ಲಿ ಕೂಸು ಬಡವಾಯ್ತು' ಎಂಬಂತಾಗಿದೆ ಪ್ರಯಾಣಿಕರ ಪರಿಸ್ಥಿತಿ. ಅದರ ಬದಲು 'ಗಂಡ-ಹೆಂಡಿರ ಜಗಳ ಉಂಡು ಮಲಗುವ ತನಕ' ಎಂಬಂತೆ ಇವರಿಬ್ಬರೂ ಸ್ವಾಭಿಮಾನ-ಪ್ರತಿಷ್ಠೆಯ ಘರ್ಷಣೆ ಬಿಟ್ಟು, ಒಂದಾದರೆ, ಪ್ರೀತಿ-ಸ್ನೇಹದಿಂದ ಎಂಥ ಕಠಿಣ ಸಮಸ್ಯೆಯನ್ನಾದರೂ ಬಗೆಹರಿಸಬಹುದು.

ಹಗ್ಗ ಜಗ್ಗುತ್ತಾ ಹೋದರೆ ತುಂಡಾಗುತ್ತದೆ; ಅಂತೆಯೇ ಯಾವುದೇ ತಿಕ್ಕಾಟದ ಅಂತಿಮ ಫಲಿತಾಂಶ ದುರಂತವೇ ಎಂಬುದನ್ನು ಮನಗಂಡು, ಕೂಡಲೇ ಶಂಕರ್ ಸಾರಿಗೆ ವ್ಯವಸ್ಥೆ ಸರಿಯಾಗಲಿ ಎಂದು ಕಳಕಳಿಯಿಂದ ಹಾರೈಸುತ್ತೇನೆ.

—ಪಿ. ರಮಾನಾಥರಾವ್, ಕೊಪ್ಪ.

## ರೇಷ್ಮೆಯ ಒಂದು ನೈಸರ್ಗಿಕ ತಳಿ?

ರಾಜ್ಯಾದ್ಯಂತ ರೇಷ್ಮೆ ಬೆಳೆಗೆ ಸರ್ಕಾರ ಅಪಾರ ಖರ್ಚಿನೊಂದಿಗೆ ಉತ್ತೇಜನ ಕೊಡುತ್ತ, ಅದರ ಸಂಶೋಧನೆಗೂ ಕೋಟ್ಯಂತರ ರೂ. ಖರ್ಚು ಮಾಡುತ್ತಿದ್ದರೆ, ಕೊಪ್ಪಕ್ಕೆ ಸಮೀಪದ ಕಾಡಿನಲ್ಲಿ ಒಂದು ಬಗೆಯ ರೇಷ್ಮೆ ಹುಳುಗಳು ಮರದ ಮೇಲೆಯೇ ನಾಲ್ಕೈದು ಕಿಲೋಗಳಷ್ಟು ಗೂಡು ಕಟ್ಟಿ ಅದ್ಭುತ ನಿರ್ಮಿಸಿವೆ.

ದಟ್ಟ ಹಳದಿ ಬಣ್ಣಕ್ಕಿರುವ ಈ ಗೂಡುಗಳು 'ಸಿ.ಬಿ.' ತಳಿಯ ರೇಷ್ಮೆ ಗೂಡನ್ನು ಹೋಲುತ್ತವೆ. ಕವಚ ಸ್ವಲ್ಪ ಗಟ್ಟಿ, ದಾರ ಸ್ವಲ್ಪ ತೆಳು. ಆದರೆ ಗೂಡು ಸುಮಾರು ೨ ಅಂಗುಲ ಉದ್ದವಾಗಿವೆ. ಈ ಭಾಗದಲ್ಲಿ ಹಾಲಿ ಬೆಳೆಯುತ್ತಿರುವ ಬೈವೋಲ್ಟೈನ್ ಗೂಡುಗಳು ಅತೀ ದೊಡ್ಡವೆಂದರೆ ೨ ಅಂಗುಲ ಬೆಳೆಯಬಲ್ಲವು.

ಸುಮಾರು ಐದಾರು ವಾರಗಳ ಹಿಂದೆ ಸಿಗದಾಳು ಘಾಟಿಯ ಪಕ್ಕದ ಕುಂಬ್ರಿಗದ್ದೆ ವಾಸಿ ಎಂ. ಎಲ್. ರಾಮಚಂದ್ರ ರಾವ್ ಎಂಬವರ ಮನೆಯ ಬಳಿಯ ಕಾಡಿನ ಗುಳ ಮಾವಿನ ಮರದಲ್ಲಿ ಮಹಾಬಲ ಗೌಡ ಎಂಬ ಗಾಡಿ ವೃತ್ತಿಯ ರೈತ ಇದನ್ನು ಗಮನಿಸಿದರು. ಅಲ್ಲಿಂದ ಅವರಿಬ್ಬರೂ ಇವನ್ನು ಸತತವಾಗಿ ಗಮನಿಸುತ್ತ ಬಂದರು.

ಮಾಮೂಲಿ ರೇಷ್ಮೆ ಹುಳುವಿನಂತೆಯೇ ಬಹುತೇಕ ಎಲ್ಲ ಘಟ್ಟಗಳನ್ನೂ ಹಾಯ್ದು ಇವು ತಾವು ಇದ್ದ ಗುಳ ಮಾವಿನ ಸಸಿಯ ಪೂರ್ತಿ ಎಲೆಗಳನ್ನೂ ತಿಂದು ಮುಗಿಸಿದವು. ಬಹುಶಃ ಅವಕ್ಕೆ ಇನ್ನೂ ಹೆಚ್ಚು ಎಲೆಯ ಅವಶ್ಯಕತೆ ಇದ್ದಿರಬಹುದು. ಇನ್ನಷ್ಟು ಆಹಾರ, ಪೋಷಣೆ ಸಿಕ್ಕಿದ್ದರೆ ಅವು ಇನ್ನೆಷ್ಟು ದೊಡ್ಡ ಗೂಡು ಕಟ್ಟುತ್ತಿದ್ದವೋ ಏನೋ!

(ಮುಂದಿನ ಪುಟಕ್ಕೆ)

## ತೀರ್ಥಹಳ್ಳಿಯಲ್ಲಿ ಕೊಬ್ಬರಿ ತುಪ್ಪದ ವಿದ್ಯುತ್ ಘಟಕ ಪ್ರಾರಂಭ

ತೆಂಗಿನಕಾಯಿ ಮತ್ತು ಕೊಬ್ಬರಿಎಣ್ಣೆಯನ್ನು ಮಾಡಿಸಲು ದೂರದೂರುಗಳಿಗೆ ಇನ್ನು ಹೋಗಬೇಕಿಲ್ಲ. ತೀರ್ಥಹಳ್ಳಿಯ ಕುರುವಳ್ಳಿಯಲ್ಲಿ ವಿದ್ಯುತ್ ಚಾಲಿತ ಯಂತ್ರ ಇದೀಗ ಪ್ರಾರಂಭವಾಗಿದೆ. ಕೊಬ್ಬರಿಯನ್ನು ಒಡೆದು ೬ರಿಂದ ೮ ಬಿಸಿಲು ಒಣಗಿಸಿ, ಕನಿಷ್ಠ ೧೦ ಕಿಲೊ ಕೊಬ್ಬರಿಯನ್ನು ತೆಗೆದುಕೊಂಡು ಹೋಗಬೇಕು. ಬೆಳಗ್ಗೆ ೮ರಿಂದ ಸಾಯಂಕಾಲ ೬ ಗಂಟೆಯವರೆಗೆ ತೆರೆದಿರುತ್ತದೆ. ೧೦ ಕಿಲೊ ಕೊಬ್ಬರಿಗೆ ೬ ಕಿಲೊ ಎಣ್ಣೆ ಮತ್ತು ೪ ಕಿಲೊ ಹಿಂಡಿ ಬರುತ್ತದೆ. ಹಿಂಡಿಯನ್ನು ನಾವೇ ವಾಪಸ್ ತರಬಹುದು. ಹಿಂಡಿಯು ಚಟ್ನಿಯಾಗಿ ಮತ್ತು ಜಾನುವಾರು ಆಹಾರವಾಗಿ ಬಳಸಲು ಉಪಯುಕ್ತ. ಒಂದು ಗಂಟೆಗೆ ಕನಿಷ್ಠ ೧೫ ಕಿಲೊ ಎಣ್ಣೆ ಮಾಡಲು ಸಾಧ್ಯ. ಭಾನುವಾರ ಮಾತ್ರ ರಜಾದಿನ. ಈ ಯಂತ್ರದಿಂದ ಪರಿಶುದ್ಧವಾದ ತಾಜಾ ಎಣ್ಣೆ ಲಭ್ಯ.

ಇದೇ ರೀತಿ ತೆಂಗಿನ ಕಾಯಿಯಿಂದಲೂ ತೆಂಗಿನ ಎಣ್ಣೆ ತೆಗೆಯಲು ಸಾಧ್ಯ. ಬಲಿತ ತೆಂಗಿನ ಕಾಯಿಯನ್ನು ಒಡೆದು ನಾಲ್ಕು ದಿನ ಬಿಸಿಲಿನಲ್ಲಿ ಒಣಗಿಸಬೇಕು. ನಂತರ ಚಿಪ್ಪಿನಿಂದ ಕಾಯಿಯನ್ನು ಬೇರ್ಪಡಿಸಿ ೮ ಬಿಸಿಲು ಒಣಗಿಸಿ, ನಂತರ ಎಣ್ಣೆ ಮಾಡಿಸಿದರೆ, ಇದೇ ತೆಂಗಿನ ಎಣ್ಣೆ. ಈಗ ಮಾರುಕಟ್ಟೆಯಲ್ಲಿ ದೊರೆಯುವ ಎಣ್ಣೆ ಹೆಚ್ಚಾಗಿ ಕಲಬೆರಕೆಯಾಗಿರುತ್ತದೆ. ಶ್ರೀಮಂತ ಮಟ್ಟದ ಕಾಯಿ-ಕೊಬ್ಬರಿಯಿಂದ ಮಾಡಿದ ಹಾಳಾದ ಕಾಯಿ-ಕೊಬ್ಬರಿ ಸೇರಿಸಿ ಮಾಡಿಟ್ಟಿರುತ್ತಾರೆ.

ಕುರುವಳ್ಳಿಯ ಕಾಶೀನಾಥ್‌ರವರು ಧೈರ್ಯ ಮಾಡಿ ಖಾದಿ ಗ್ರಾಮೋದ್ಯೋಗದ ಸಹಕಾರದಿಂದ ಈ ಉದ್ಯಮ ಶುರು ಮಾಡಿದ್ದಾರೆ. ಬೆಳೆಗಾರರು—ಬಳಕೆದಾರರೂ ಅವರ ಕೈಗೆ ಕೆಲಸ ಕೊಟ್ಟರೆ ಮಾತ್ರ ಅವರ ಸಾಧನೆ ಸಾರ್ಥಕವಾಗುತ್ತದೆ.

ಸರ್ಕಾರವು ಸಣ್ಣ ಉದ್ದಿಮೆದಾರರಿಗೆ ಅನೇಕ ರೀತಿಯ ಸಹಕಾರ, ಪ್ರೋತ್ಸಾಹ ನೀಡುತ್ತದೆ ಎಂದು ಪ್ರಚಾರ ಮಾಡುತ್ತಿರುತ್ತದೆ. ಕಾಶೀನಾಥ್‌ರವರು ಹಲವಾರು ಮೂಲದಿಂದ ಮತ್ತು ಖಾದೀ ಗ್ರಾಮೋದ್ಯೋಗದ ಸಹಕಾರದಿಂದ ಈ ಘಟಕ ಸ್ಥಾಪಿಸಿ ಬಳಕೆದಾರರಿಗೆ ಅನುಕೂಲ ಕಲ್ಪಿಸಿದ್ದಾರೆ. ಆದರೆ ಸರ್ಕಾರದ ಅಂಗಸಂಸ್ಥೆಯಾದ ವಿದ್ಯುತ್ ಮಂಡಲಿಯಿಂದಲೇ ಅನೇಕ ರೀತಿಯ ತೊಂದರೆ ಪ್ರಾಪ್ತವಾಗಿದೆ. ವಿಪರೀತ ದರ ಏರಿಕೆ ಮತ್ತಿತರ ಕಿರುಕುಳದಿಂದ ಬೇಸತ್ತ ಕಾಶೀನಾಥ್, ನಷ್ಟವಾದರೂ ನಡೆಸುತ್ತಿದ್ದಾರೆ. ಸರ್ಕಾರದ ಧೋರಣೆಯು ವಿಪರ್ಯಾಸದಿಂದ ಕೂಡಿದ್ದು, ಪ್ರಾಮಾಣಿಕವಾಗಿ ದುಡಿಯುವ ಮಂದಿಗೆ ಇಕ್ಕಟ್ಟಿನ ಸ್ಥಿತಿ ಉಂಟಾಗುತ್ತದೆ ಎಂಬುದಕ್ಕೆ ಇದೊಂದು ಉದಾಹರಣೆ ಮಾತ್ರ.

ಅವರ ವಿಳಾಸ : ಕಾಶೀನಾಥ್ ಮಂಜುನಾಥ್, ಶ್ರೀ ವಿಜಯದುರ್ಗ ಇಂಡಸ್ಟ್ರೀಸ್ (ಕೊಬ್ಬರಿ ಎಣ್ಣೆ ಮತ್ತು ಹಿಟ್ಟಿನ ಗಿರಣಿ), ಕುರುವಳ್ಳಿ—ತೀರ್ಥಹಳ್ಳಿ.

—ವಸಂತ್ ಕುಮಾರ್ ಹರ್ಡೀಕರ್.

## ಕೊಪ್ಪ ತಾ॥ ಕ. ಸಾ. ಪ. ಯೋಜಿಸಿರುವ ಈ ವರ್ಷದ ಕಾರ್ಯಕ್ರಮಗಳು

ಹರಿಹರಪುರ: ಇಲ್ಲಿ ಈಚೆಗೆ ರಚಿತವಾದ ತಾ॥ ಕನ್ನಡ ಸಾಹಿತ್ಯ ಪರಿಷತ್ತಿನ ನೂತನ ಕಾರ್ಯಕಾರಿ ಸಮಿತಿ ತೀರ್ಮಾನಿಸಿದಂತೆ, ತಾಲ್ಲೂಕಿನ ವಿವಿಧೆಡೆ ಏರ್ಪಡಿಸಲು ಉದ್ದೇಶಿಸಿರುವ ವರ್ಷದ ಕನಿಷ್ಠ ೧೦ ಕಾರ್ಯಕ್ರಮಗಳು ಹೀಗಿವೆ—

೧) ಪ್ರಬಂಧ ರಚನಾ ಕಮ್ಮಟ ೨) ರಸಮೆತ್ತಾದ ಪತ್ರ ಲೇಖನ ಶಿಬಿರ ೩) ನಾಟಕ ರಚನಾ ಕಾರ್ಯಾಗಾರ ೪) ಉದಯೋನ್ಮುಖ ಕವಿಗಳ ಗೋಷ್ಠಿ ೫) ಅವ್ಯಕ್ತ ಧ್ವನಿ ಸ್ಪಂದನ (ಸ್ತ್ರೀ, ದಲಿತ ಇತ್ಯಾದಿ) ೬) ಮಲೆನಾಡ ಜನಜೀವನದ ತೌಲನಿಕ ಅಧ್ಯಯನ ಶಿಬಿರ (ಉದಾ: 'ಚಿಟ್ಟದ ಜೀವ' ಮತ್ತು 'ಕಾನೂರು ಹೆಗ್ಗಡಿತಿ' ಕಾದಂಬರಿಗಳಲ್ಲಿ ಚಿತ್ರಿಸಿದಂತೆ) ೭) ಜನಪದ ಸಾಹಿತ್ಯ ಗೋಷ್ಠಿ ೮) ಸಣ್ಣ ಕಥೆಗಳ ರಚನಾ ಸ್ಪರ್ಧೆ ೯) ವಾರ ಮತ್ತು ದಿನ ಪತ್ರಿಕೆ (ವಾರದ ವಿಭಾಗ)ಗಳಲ್ಲಿ ಬರುವ ಸಣ್ಣ ಕಥೆಗಳು ಮತ್ತು ಜನ ಸ್ಪಂದನ ೧೦) ಪಟಾಮ ಕಾರಿ ಮಾತುಗಾರಿಕೆ ಮತ್ತು ಪತ್ರಿಕೆಗಳಿಗೆ ಬರೆಯುವುದು— ಇತ್ಯಾದಿ

## ಯಾರು ಈ ಮಹಿಳಾಮಣಿ ?

ನ. ರಾ. ಪುರ : ಈ ತಾಲ್ಲೂಕಿನ ಮುಂದಾಳು ಮಹಿಳೆಯೊಬ್ಬರು ಶೃಂಗೇರಿ-ಕೋಲಾರ ಬಸ್ಸಿನಲ್ಲಿ ತಾನು 'ಎಂಎಲ್ಎ ಪತ್ನಿ' ಎಂದು ಹೇಳಿ ಪುಕ್ಕಟೆ ಪ್ರಯಾಣ ಮಾಡಲೆಳಸಿ ಬಯಲಾದ ಪ್ರಕರಣ ನಡೆಯಿತೆ?

ಫೆ. ೧ರ ರಾತ್ರಿ ಸದರಿ ಬಸ್ಸಿಗೆ ಹತ್ತಿದ ಈ ಮಹಿಳಾಮಣಿ ತಾನು "ಎಂಎಲ್ಎ ಮನೆಯವರು" ಎಂದು ಹೇಳಿ, ಕಂಡಕ್ಟರ್ ಪಾಸ್ ತೋರಿಸಲು ಕೇಳಿದಾಗ "ಮನೆಯಲ್ಲೇ ಉಳಿದು ಬಿಟ್ಟಿತು" ಎಂದು ಕಂಡಕ್ಟರನ್ನು ನಂಬಿಸಿ ಬಿಟ್ಟರೆ? ಆದರೆ ಗುಬ್ಬಿ ಬಳಿ ಬಸ್ಸಿಗೆ ಹತ್ತಿದ ಚೆಕ್ಕಿಂಗ್‌ನವರೂ ಸಹ ಈ ನೆಪವನ್ನೇ ನಂಬಲೊಪ್ಪದೆ, ಬಸ್ಸಿನಿಂದ ಕೆಳಗೆ ಕರೆದು, "ನೋಡೀಮ್ಮ ೫೦೦ ರೂ. ವರೆಗೂ ನಾವು ಫೈನ್ ಹಾಕಬೇಕಾಗುತ್ತೆ. ಅದೆಲ್ಲ ಬೇಡ. ಚಾರ್ಜ್ ಕೊಟ್ಟು ಟಿಕೆಟ್ ತೆಗೆದುಕೊಂಡು ಬಿಡಿ" ಎಂದು ಕನಿಕರ ತೋರಿಸಿದಾಗ ಕೊನೆಗೂ ಬಯಲಾದ ತನ್ನ ಅಪರಾಧಕ್ಕೆ ತಾನೇ ಬೇಸ್ತು ಬಿದ್ದು, ಟಿಕೆಟ್ ಪಡೆದು ಪ್ರಯಾಣ ಮುಂದುವರಿಸಿದರೆ?

ಬಸ್ಸಿನಲ್ಲಿದ್ದ ಕಿಲಾಡಿ ಕೊಪ್ಪ ತಾಲ್ಲೂಕಿನವರೊಬ್ಬರು ಬೆನ್ನು ಬಿಡದ ಭೂತದಂತೆ,




"ಅಲ್ಲಮ್ಮ, ನಾನು ಎಂಎಲ್ಎ ಮನೆಯವರನ್ನು ನೋಡಿದ್ದೇನೆ. ಅವರು ನಿಮ್ಮ ಹಾಗೆ ಇರಲಿಲ್ಲವೆಂತ ಜ್ಞಾಪಕ?" ಎಂದಾಗ "ಏ ss, ಇಲ್ರೀ. ನಾನು ....." ಎಂದು ತಮ್ಮ ಪರಿಚಯ ಹೇಳಿಕೊಂಡು "ಹ್ಹೆ ಹ್ಹೆ ಹ್ಹೆ" ಎಂದರೆ?

ಸರ್ಕಾರದ ಬೊಕ್ಕಸದಿಂದ ಜುಜುಬಿ ೫೦ ರೂ. 'ಕದಿಯಲು' 'ಎಂಎಲ್ಎ ಮನೆಯವರು' ಆಗಲೆಳಸಿದ ಈ ಮಹಿಳಾಮಣಿ ಯಾರು ವನಮಾಲಮ್ಮನೆ?... ...

—ಹರಟೆಮಲ್ಲ

## ಕುಷ್ಠರೋಗ ನಿವಾರಣಾ ದಿನ

**ಕೊಪ್ಪ**

ಇಲ್ಲಿನ ಕಿ! ಕಾಲೇಜಿನಲ್ಲಿ ಜ. ೩೦ರಂದು ನಡೆದ ಕುಷ್ಠ ರೋಗ ನಿವಾರಣಾ ದಿನಾಚರಣೆ ಕಾರ್ಯಕ್ರಮದಲ್ಲಿ ಹುತಾತ್ಮರಿಗೆ ಶ್ರದ್ಧಾಂಜಲಿ ಸಲ್ಲಿಸಿದ ನಂತರ, ರೋಗದ ಲಕ್ಷಣಗಳು, ಹರಡುವ ರೀತಿ, ಔಷಧೋಪಚಾರ, ರೋಗ ನಿವಾರಣೆಯಲ್ಲಿ ಸಾರ್ವಜನಿಕರ ಪಾತ್ರ ಇವುಗಳ ಬಗ್ಗೆ ಸ! ಆಸ್ಪತ್ರೆಯ ವೈದ್ಯ ನೆರವಿನ ಕಾರ್ಯಕರ್ತ ಬಿ. ಎಂ. ರಾಮಮೂರ್ತಿ ಮಾಹಿತಿ ನೀಡಿದರು.

ಪ್ರಿನ್ಸಿಪಾಲ್ ರಾಮಕೃಷ್ಣಯ್ಯ ಅಧ್ಯಕ್ಷತೆ ವಹಿಸಿದ್ದರು. ಆರೋಗ್ಯ ಶಿಕ್ಷಕ ರೇವಣ್ಣ ಗೌಡ ಕಾರ್ಯಕ್ರಮದ ಉದ್ದೇಶ ವಿವರಿಸಿದರು. ಎ. ಜಿ. ಸುಬ್ರಮಣ್ಯ ಸ್ವಾಗತಿಸಿ, ಈರಯ್ಯ ವಂದಿಸಿದರು.

**ಹರಿಹರಪುರ**

ಇಲ್ಲಿನ ಕಿರಿಯ ಕಾಲೇಜಿನಲ್ಲೂ ಮೇಲ್ಕಂಡ ಕಾರ್ಯಕ್ರಮವನ್ನು ಬಿ ಎಂ. ರಾಮಮೂರ್ತಿ ನಡೆಸಿಕೊಟ್ಟರು. ವಿದ್ಯಾರ್ಥಿಗಳು ಪ್ರಶ್ನೆಗಳನ್ನು ಕೇಳಿ ಅನುಮಾನ ಪರಿಹರಿಸಿಕೊಂಡರು. ಸಿ. ಎಸ್. ಛಾಯಾಪತಿ ಕಾರ್ಯಕ್ರಮ ನಿರ್ವಹಿಸಿದರು.

## ಟ್ರೈಸಂ : ದೂರು

ಕೊಪ್ಪ: ಈ ತಾಲ್ಲೂಕಿನ ಅತ್ತಿಕೊಡಿಗೆ [illegible]ದ ೮-೧೦ ಮಂದಿ ಅಭ್ಯರ್ಥಿಗಳಿಗೆ 'ಟ್ರೈಸಂ' ಯೋಜನೆಯಡಿ ತರಬೇತಿಗಾಗಿ ಸಂದರ್ಶನಕ್ಕೆ ಕರೆ ಕಳುಹಿಸಿದ ವೈಖರಿ ಕೇಳಿ! ಗಿತ್ತೆಂದರೆ, ಜ. ೨೨ರ ಬೆಳಗ್ಗೆ ೧೦-೩೦ಕ್ಕೆ ನಡೆಯಲಿದ್ದ ಸಂದರ್ಶನಕ್ಕೆ ೧೪ರಂದು ತಯಾರಿಸಿದ ನೋಟೀಸನ್ನು ಅಂಚೆಗೆ ಹಾಕಿದ್ದು ೧೯ರಂದು; ಅವು ತಲುಪಿದ್ದು ೨೩ರಂದು—ಸಂದರ್ಶನದ ಮರು ದಿನ !

ಕಳೆದ ವರ್ಷವೂ ಹೀಗೇ ಆಗಿತ್ತು. ಇದೇನು, ಯಾರನ್ನೋ ಮೊದಲೇ ಆಯ್ಕೆ ಮಾಡಿಕೊಂಡು ಮಿಕ್ಕವರ ಕಣ್ಣೊರೆಸಲಿಕ್ಕಾಗಿ ಹೀಗೆ ಮಾಡುತ್ತಾರೋ ? ಎಂದು ಅಭ್ಯರ್ಥಿಗಳು ಆಶ್ಚರ್ಯಪಡುತ್ತಾರೆ.

## ಸಮಾಜ ಸೇವೆಗೆ ಯುವ ಜನರಿಗೆ ಕರೆ

ಶೃಂಗೇರಿ : ಸಮಾಜ-ಸೇವಾ ಕಾರ್ಯಗಳಲ್ಲಿ ಯುವಜನರು ಸಕ್ರಿಯವಾಗಿ ಭಾಗವಹಿಸಿ ಗ್ರಾಮೀಣ ಜನತೆಯ ಅಭಿವೃದ್ಧಿಗೆ ಶ್ರಮಿಸಬೇಕೆಂದು ಮರ್ಕಲ್ ಮಂಡಲ ಪ್ರಧಾನರಾದ ಕೆ. ಟಿ. ಚಂದ್ರಹಾಸ ಗೌಡ ಯುವ ಜನತೆಗೆ ಕರೆ ನೀಡಿದರು. ಅವರು ಈಚೆಗೆ ಕಿಗ್ಗದಲ್ಲಿ ನಡೆದ ರಾಷ್ಟ್ರೀಯ ಯುವ ಸಪ್ತಾಹದ ಸಾಂಸ್ಕೃತಿಕ ದಿನದ ಅಧ್ಯಕ್ಷತೆ ವಹಿಸಿದ್ದರು.

ನೆಹರು ಯುವ ಕೇಂದ್ರವು ಕಿಗ್ಗದ ವಿವೇಕ ಯುವಕ ಸಂಘದ ಸಹಕಾರದೊಡನೆ ಏರ್ಪಡಿಸಿದ್ದ ಈ ಸಮಾರಂಭದ ಅಂಗವಾಗಿ ಯುವಕರಿಗೆ ಹಲವಾರು ಸಾಂಸ್ಕೃತಿಕ ಮತ್ತು ಕ್ರೀಡಾ ಸ್ಪರ್ಧೆಗಳನ್ನು ನಡೆಸಲಾಯಿತು. ಈ ಸ್ಪರ್ಧೆಗಳನ್ನು ಸ್ಥಳೀಯ ಪ್ರೌಢಶಾಲೆಯ ಗೋಪಾಲಪ್ಪ ಉದ್ಘಾಟಿಸಿದರು. ವಿಜೇತರಾದವರಿಗೆ ಮಂಡಲ ಸದಸ್ಯ ರತ್ನಾಕರ್ ಬಹುಮಾನ ವಿತರಿಸಿದರು. ಜಿಲ್ಲಾ ಯುವಜನ ಸಂಯೋಜಕ ಆರ್. ಚಲುವರಾಜ್ ಮುಖ್ಯ ಅತಿಥಿಯಾಗಿದ್ದರು.

**ಅಗಳಗಂಡಿಯಲ್ಲಿ**

ಯುವಜನರು ಕ್ರೀಡಾ ಮತ್ತು ಸಾಂಸ್ಕೃತಿಕ ಕಾರ್ಯಗಳಲ್ಲಿ ಮಾತ್ರವಲ್ಲದೆ ಸಮಾಜದ ಅಂಕುಡೊಂಕುಗಳನ್ನು ತಿದ್ದುವ ಕೆಲಸದಲ್ಲಿಯೂ ಸಕ್ರಿಯವಾಗಿ ಭಾಗವಹಿಸಬೇಕೆಂದು ಅಗಳಗಂಡಿ ಮಂಡಲ ಪ್ರಧಾನ ಕೆ. ಸಿ. ಸತೀಶ್ ಕರೆ ನೀಡಿದರು. ಅವರು ಅಗಳಗಂಡಿಯಲ್ಲಿ ಈಚೆಗೆ ನೆಹರು ಯುವ ಕೇಂದ್ರವು ಸ್ಥಳೀಯ ವಿನಾಯಕ ಯುವಕ ಸಂಘ ಮತ್ತು ವನಿತಾ ಯುವತಿ ಮಂಡಳಿಯವರೊಂದಿಗೆ ರಾಷ್ಟ್ರೀಯ ಯುವ ಸಪ್ತಾಹದ ಅಂಗವಾಗಿ ನಡೆಸಿದ ಸಹಭಾಗಿತ್ವ ದಿನದ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಯುವಜನ ಸಂಯೋಜಕ ಆರ್. ಚಲುವರಾಜ್ ಮುಖ್ಯ ಅತಿಥಿಯಾಗಿದ್ದರು.

ಕ್ರೀಡಾ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಹಿಳಾ ಸಮಾಜದ ಶ್ರೀಮತಿ ಲಕ್ಷ್ಮಿದೇವಿ ಅವರು ಯುವಕ ಸಂಘದ ಅಧ್ಯಕ್ಷರಾದ ಚಂದ್ರಶೇಖರ್‌ರವರ ಅಧ್ಯಕ್ಷತೆಯಲ್ಲಿ ಉದ್ಘಾಟಿಸಿದರು. ಈ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಟಿ. ಕೆ. ಶ್ರೀನಿವಾಸ್ ಬಹುಮಾನ ವಿತರಿಸಿದರು.

## ನೈಸರ್ಗಿಕ ರೇಷ್ಮೆ ತಳಿ

(ಹಿಂದಿನ ಪುಟದಿಂದ)

ಇಲ್ಲಿನ ವಿಪರೀತ ಚಳಿ, ಇಬ್ಬನಿ, ಬಿಸಿಲು ಮತ್ತು ಒಣ ಹವೆಯನ್ನು ಸಹಿಸಿಯೂ ಅವು ನೈಸರ್ಗಿಕವಾಗಿ ತಮ್ಮ ಜಟುವಟಿಕೆ ಮಾಡಬಲ್ಲವಾದರೆ, ಅವುಗಳ ಬಗ್ಗೆ ವ್ಯವಸ್ಥಿತವಾಗಿ ಸಂಶೋಧನೆ ನಡೆಸಿ, ಈ ತಳಿಯನ್ನು ಕ್ರಮವಾಗಿ ಅಭಿವೃದ್ಧಿ ಪಡಿಸಿದರೆ ಪ್ರಾಯಶಃ ಮಲೆನಾಡಿಗೆ ಇದೇ ಅತ್ಯಂತ ಸೂಕ್ತ ಮತ್ತು ಉತ್ಕೃಷ್ಟ ತಳಿಯಾಗಬಹುದೋ ಏನೋ ಎನ್ನುತ್ತಾರೆ [illegible]ಚಂದ್ರರಾವ್. ರೇಷ್ಮೆ ಹುಟ್ಟಿದ್ದೂ [illegible]ನಿಂದಲೇ ತಾನೆ?

[illegible] ಷ್ಮೆ ಇಲಾಖೆ ಈ ಕಡೆ ಅಗತ್ಯ ಗಮ[illegible]ಬೇಕಾಗಿದೆ.

## ಭತ್ತದ ಬೆಳೆಯ ಕ್ಷೇತ್ರೋತ್ಸವಗಳು

ಬಿಳಾಲ್‌ಕೊಪ್ಪ : ಇಲ್ಲಿಗೆ ಸಮೀಪದ ಶಾಂತಿಗ್ರಾಮದ ಎಂ. ರಾಮಚಂದ್ರರವರ ಜಮೀನಿನಲ್ಲಿ ಕನಿಷ್ಠ ತಾಂತ್ರಿಕತೆ ಅಳವಡಿಕೆ ಬೇಸಾಯ ಪದ್ಧತಿಯ ಕ್ಷೇತ್ರೋತ್ಸವವು ಮಂಡಲ ಪ್ರಧಾನ ಬಿ. ಎಸ್. ಭಾಸ್ಕರ್‌ರವರ ಅಧ್ಯಕ್ಷತೆಯಲ್ಲಿ ಈಚೆಗೆ ನಡೆಯಿತು. ಕೊಪ್ಪ ಸ!! ಕೃಷಿ ನಿರ್ದೇಶಕರಾದ ಶ್ರೀನಿವಾಸಯ್ಯ ಮುಖ್ಯ ಅತಿಥಿಗಳಾಗಿದ್ದರು. ಪ್ರಗತಿಪರ ರೈತರು ಆಗಮಿಸಿದ್ದ ಕಾರ್ಯಕ್ರಮದಲ್ಲಿ ಶಾಂತಿಗ್ರಾಮದ ಕೃಷಿ ಸಹಾಯಕ ವಿ. ಎಸ್. ಶಿವಮೂರ್ತಿ ವಂದಿಸಿದರು.

**ಜಯಪುರ**

ಸಮೀಪದ ಕಟ್ಟಿಮನೆಯ ರವಿಪ್ರಕಾಶ್‌ರವರ ಗದ್ದೆಯಲ್ಲಿ ಕನಿಷ್ಠ ತಾಂತ್ರಿಕ ಅಳವಡಿಕೆ ಬೇಸಾಯ ಪದ್ಧತಿಯ ಕ್ಷೇತ್ರೋತ್ಸವದ ಕಾರ್ಯಕ್ರಮದಲ್ಲಿ ಜಿಲ್ಲಾ ಪರಿಷತ್ ಸದಸ್ಯ ಎಚ್. ಎಂ. ಶಾಸ್ತ್ರಿ ಅಧ್ಯಕ್ಷತೆ ವಹಿಸಿದ್ದರು. ಕೊಪ್ಪ ಸ!! ಕೃಷಿ ನಿರ್ದೇಶಕ ಶ್ರೀನಿವಾಸಯ್ಯ ಮತ್ತು ಕೃಷಿ ಅಧಿಕಾರಿ ರಾಜಶೇಖರ್ ಮುಖ್ಯ ಅತಿಥಿಗಳಾಗಿದ್ದರು. ಕೃಷಿ ಸಹಾಯಕ ಎಸ್. ಬಿ. ಹೋಳಿನ ಸ್ವಾಗತಿಸಿ, ಸ!! ಕೃಷಿ ಅಧಿಕಾರಿ ಸದಾಶಿವಪ್ಪ ವಂದಿಸಿದರು.

## ಪುಸ್ತಕ ಬಿಡುಗಡೆ

ಕಿಗ್ಗ : ಎಚ್. ಎಸ್. ಋಷ್ಯಶೃಂಗ ಅವರು ಬರೆದ, ಇಲ್ಲಿನ ದೇವಾಲಯದ ಸ್ಥಳ ಪುರಾಣವನ್ನೊಳಗೊಂಡ 'ದೇವ ಮಾನವ ಮಹರ್ಷಿ ಋಷ್ಯಶೃಂಗ' ಎಂಬ ಪುಸ್ತಕವನ್ನು ಶೃಂಗೇರಿ ಮಠಾಧೀಶರು ಈಚೆಗೆ ಬಿಡುಗಡೆ ಮಾಡಿದರು. ಹರಿಹರಪುರ ಮಠಾಧೀಶರು ಈ ಸಮಾರಂಭದಲ್ಲಿ ಹಾಜರಿದ್ದರು.

ಸ್ಥಳೀಯರೇ ಆದ ಈ ಪುಸ್ತಕದ ಲೇಖಕರಿಗೂ ಮುದ್ರಕ ಎಂ.ಎಸ್. ಜೋಶಿಯವರಿಗೂ ರುದ್ರಹೋಮ ಸಮಿತಿಯವರು ನೆನಪಿನ ಕಾಣಿಕೆ ನೀಡಿದರು. ಬೆಂಗಳೂರಿನ ಖ್ಯಾತ ವಕೀಲ ವಾಸುದೇವನ್ (ಹೆಗಡೆಯವರ ರೇವಜಿತು ಹಗರಣ ಸಾಬೀತುಗೊಳಿಸಿದ ಖ್ಯಾತಿ) ಅವರೂ ಸಮಾರಂಭದಲ್ಲಿ ಹಾಜರಿದ್ದರು. ಕೆ. ಸಿ. ಶಿವಶಂಕರ ರಾವ್ ಸ್ವಾಗತಿಸಿದರು.

## ಯೋಗಾಸನ ಶಿಬಿರ

ಕೊಪ್ಪ : ಜ ೨೩ ರಿಂದ ಫೆ. ೧ರವರೆಗೆ ಶ್ರೀಮತಿ ಸರೋಜ ಶಿವಮೂರ್ತಿ ಇವರ ಮಾರ್ಗದರ್ಶನದಲ್ಲಿ ಕೊಪ್ಪ ಪಟ್ಟಣ ಶಾಲೆಯಲ್ಲಿ ಮಹಿಳೆಯರಿಗಾಗಿ ನಡೆದ ೧೦ ದಿನಗಳ ಯೋಗಾಸನ ಶಿಬಿರದಲ್ಲಿ ೧೫ ಜನ ಮಹಿಳೆಯರು ಭಾಗವಹಿಸಿದ್ದರು.

ಅನೇಕ ಆಸಕ್ತ ಮಹಿಳೆಯರ ಅಪೇಕ್ಷೆ ಮೇರೆಗೆ ಪುನಃ ತಾ. ೧೪-೨-೯೧ ರಿಂದ ೧೫ ದಿನಗಳ ಉಚಿತ ಯೋಗಾಸನ ಶಿಬಿರ ಪಟ್ಟಣ ಹಿರಿಯ ಪ್ರಾಥಮಿಕ ಶಾಲಾ ಕಟ್ಟಡದಲ್ಲಿ ನಡೆಸಲು ವ್ಯವಸ್ಥೆಯಾಗಿದೆ. ಆಸಕ್ತ ಮಹಿಳೆಯರು ಸಂಜೆ ೬ ರಿಂದ ೭ ಘಂಟೆಯವರೆಗೆ ನಡೆಯುವ ಈ ಶಿಬಿರದಲ್ಲಿ ಭಾಗವಹಿಸಬಹುದು. ವಿವರಗಳಿಗೆ ಶ್ರೀಮತಿ ಶಶಿಕಲಾ ಚಾಮರಾಜ್, ಸರ್ಕಾರಿ ಪದವಿಪೂರ್ವ ಕಾಲೇಜ್, ಕೊಪ್ಪ ಇವರನ್ನು ಸಂಪರ್ಕಿಸಬಹುದು.

(ವರದಿ : ಬಿ. ವಿ ಶಿವಮೂರ್ತಿ)

## ಕಾವ್ಯವಾಚನ

ಹರಿಹರಪುರ : ಇಲ್ಲಿನ ರಾಷ್ಟ್ರೋತ್ಥಾನ ಬಳಗದ ಆಶ್ರಯದಲ್ಲಿ ಶ್ರೀ ಹರಿಶ್ಚಂದ್ರ ಕಾವ್ಯವಾಚನ ಮತ್ತು ವ್ಯಾಖ್ಯಾನ ಕಾರ್ಯಕ್ರಮ ಜ ೬ರಿಂದ ೨೬ ರವರೆಗೆ ನಡೆಯಿತು. ಬೆಂಗಳೂರಿನ ಗಮಕ ಕಲಾವಿದೆ ಶ್ರೀಮತಿ ಸುಭದ್ರಾ ಸೋಮಶೇಖರ್‌ರ ಕಾವ್ಯವಾಚನ ಮತ್ತು ಎಸ್. ವೆಂಕಟರಮಣರ ವ್ಯಾಖ್ಯಾನದಿಂದ ಆರಂಭಗೊಂಡ ಈ ಕಾರ್ಯಕ್ರಮದಲ್ಲಿ ಸುತ್ತಮುತ್ತಲ ಉದಯೋನ್ಮುಖ ಕಲಾವಿದರಿಗೆ ಅವಕಾಶ ಕಲ್ಪಿಸಲಾಗಿತ್ತು. (ವರದಿ : ಜೆ ಎಂ. ಶ್ರೀನಿಧಿ)

## ಕಬಡ್ಡಿ, ಖೊಖೊ ಪಂದ್ಯಾವಳಿ

ಕುದುರೆಗುಂಡಿ : ಇಲ್ಲಿನ ವಿನಾಯಕ ಯುವಕ ಸಂಘದ ೨೧ ನೇ ವಾರ್ಷಿಕೋತ್ಸವದ ಅಂಗವಾಗಿ ಕೊಪ್ಪ, ಶೃಂಗೇರಿ, ನ ರಾ ಪುರ ತಾಲ್ಲೂಕುಗಳನ್ನೊಳಗೊಂಡಂತೆ ಅಂತರ ತಾಲ್ಲೂಕು ಆಹ್ವಾನಿತ ಕಬಡ್ಡಿ (ಯುವಕರಿಗೆ) ಮತ್ತು ಖೊ-ಖೊ (ಯುವತಿಯರಿಗೆ) ಪಂದ್ಯಾವಳಿಯನ್ನು ಏರ್ಪಡಿಸಲಾಗಿದೆ. ಆಸಕ್ತರು ದಿನಾಂಕ : ೧೩-೨-೯೧ ರ ಒಳಗಾಗಿ ತಲುಪುವಂತೆ ಪ್ರವೇಶ ಪತ್ರವನ್ನು ಕಳುಹಿಸತಕ್ಕದ್ದು. ಪ್ರವೇಶ ಶುಲ್ಕ ರೂ. ೨೫-೦೦ ವಿಳಾಸ : ಎ. ಎಲ್. ಚಂದ್ರಶೇಖರ್, ಕಾರ್ಯದರ್ಶಿ, ಶ್ರೀ ವಿನಾಯಕ ಯುವಕ ಸಂಘ, ಕುದುರೆಗುಂಡಿ, ಕೊಪ್ಪ ತಾ!!.

## ವಾರ್ಷಿಕೋತ್ಸವ

ಮೇಗೂರು : ಇಲ್ಲಿನ ಹರಳಾನೆ ಹಿ. ಪ್ರಾ. ಶಾಲೆಯ ವಾರ್ಷಿಕೋತ್ಸವ ಈಚೆಗೆ ನಡೆಯಿತು. ಶಾಲಾಭಿವೃದ್ಧಿ ಸಮಿತಿ ಅಧ್ಯಕ್ಷ ಮಂಡಲ ಉಪ ಪ್ರಧಾನ ಎಚ್. ಎಸ್. ರಂಗಣ್ಣ ಅಧ್ಯಕ್ಷತೆ ವಹಿಸಿದ್ದರು. ಎ ಇ ಒ ಚಾಮರಾಜ್ ಮುಖ್ಯ ಅತಿಥಿಯಾಗಿದ್ದರು. ಕೆ. ವಿ. ಎಲ್. ರಾವ್ ಮತ್ತು ಎಚ್. ಕೆ. ಸುಬ್ರಮಣ್ಯ ಬಹುಮಾನ ವಿತರಿಸಿದರು. ಮಕ್ಕಳ ಮನರಂಜನಾ ಕಾರ್ಯಕ್ರಮ ನಡೆಯಿತು.

ಈ ಶಾಲೆಯಲ್ಲಿ ೧೦ ವರ್ಷಗಳ ಹಿಂದೊಮ್ಮೆ ಮಾತ್ರ ವಾರ್ಷಿಕೋತ್ಸವ ನಡೆದಿದ್ದು, ಅನಂತರ ನಡೆದಿರಲಿಲ್ಲ. ಹೀಗಾಗಿ ಈ ಸಮಾರಂಭದಲ್ಲಿ ಗ್ರಾಮಸ್ಥರು ಉತ್ಸಾಹದಿಂದ ಭಾಗವಹಿಸಿದ್ದರು.

## ಡಾ|| ಐತಾಳರಿಗೆ ಜೇಸಿ ಉನ್ನತ ಪ್ರಶಸ್ತಿ

ಶೃಂಗೇರಿ : ಇಲ್ಲಿನ ಜೇಸಿ ಮಾಜಿ ಅಧ್ಯಕ್ಷರಾದ ಡಾ|| ಯು. ಎಸ್. ಐತಾಳರಿಗೆ ಈಚೆಗೆ ಬೆಂಗಳೂರಿನಲ್ಲಿ ನಡೆದ ಜೇಸಿ ರಾಜ್ಯ ಸಮ್ಮೇಳನದಲ್ಲಿ ಸಂಸ್ಥೆಯ ಅತ್ಯುನ್ನತ 'ಎಚ್ ಜಿ.ಎಫ್' ಪ್ರಶಸ್ತಿ ಲಭಿಸಿದೆ.

ಇನ್ನೂ ಹಲವಾರು ಪ್ರಶಸ್ತಿಗಳನ್ನೂ ಶೃಂಗೇರಿ ಜೇಸಿ ಗಳಿಸಿದೆ.

## ಅಡಿಕೆ ಧಾರಣೆ

**ಶಿವಮೊಗ್ಗ ೯-೨-೯೧**

ಸರಕು : ೫೪೪೩-೫೭೨೫

ಬೆಟ್ಟೆ : ೪೭೪೫-೫೦೬೯

ಗೊರಬಲು : ೩೦೬೦-೩೧೪೦

**ಸಾಗರ ೯-೨-೯೧**

ಆಪಿ : ೫೭೨೯-೫೯೫೯

ರಾಶಿ ಇಡಿ : ೪೫೮೬-೪೭೭೯

ಚಾಲಿ : ೪೮೯೬-೪೭೩೧

ಸಿಪ್ಪೆ ಗೋಟು : ೧೯೯೮-೨೧೬೯

**ಕನ್ನಡ ಅಂಕಿಗಳನ್ನೇ ಬಳಸಿ**

೦ ೧ ೨ ೩ ೪ ೫ ೬ ೭ ೮ ೯

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಶಿರಿಮನೆ ನಾಗರಾಜ್ [illegible] : ದೀಪಟೆಗೆ ಅಜ್ಜು ಕೂಟೆ, ಕೊಪ್ಪ